# ಮಹಾಮನೆ



ಸಂಪುಟ – ೩ | ಮಾರ್ಚ್ ೨೦೦೧ | ಸಂಚಿಕೆ – ೮

ಬೆಳಗಾವಿ ನಾಗನೂರು ರುದ್ರಾಕ್ಷಿ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧರಾಮ ಮಹಾಸ್ವಾಮಿಗಳು 'ಮರಣವೇ ಮಹಾನವಮಿ' ಚಿಂತನ ಸಂಕಿರಣವನ್ನು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ : ಬೆಳಗಾವಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ || ಎಫ್.ವಿ. ಮಾನ್ವಿ ಹಿರಿಯ ನಾಗರಿಕ ವೇದಿಕೆ ಅಧ್ಯಕ್ಷ ಶ್ರೀ ಜಿನದತ್ತ ದೇಸಾಯಿ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ ಶ್ರೀ ಜೆ.ಪಿ. ಚಿಕ್ಕರಿಯಪ್ಪ ಮತ್ತು ಕನ್ನಡ ಭವನ ವಿಶ್ವಸ್ಥ ಮಂಡಳಿ ಕಾರ್ಯದರ್ಶಿ ಶ್ರೀ ವಿ.ಸಿ. ಮಾಲಗತ್ತಿ ಅವರನ್ನು ಕಾಣಬಹುದು.



## ಲೇಖಕರಲ್ಲಿ ಬಿನ್ನಹ

- ❖ 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ-ಸಂಸ್ಕೃತಿಗಳಿಗೆ ಸಂಬಂಧಿಸಿದ ಉಪಯುಕ್ತ ಲೇಖನಗಳನ್ನು ಪ್ರಕಟಿಸಲಾಗುತ್ತದೆ.
- ❖ ಶರಣ ಕ್ಷೇತ್ರ ಪರಿಚಯ, ಶರಣ ಸಾಹಿತಿಗಳ ಪರಿಚಯ, ಶರಣ ಸಾಹಿತ್ಯ ಕೃತಿಗಳ ಪರಿಚಯದ ಲೇಖನಗಳು 'ಮಹಾಮನೆ'ಯ ಎರಡು ಪುಟಗಳಿಗೆ ಮೀರಬಾರದು.
- ❖ ವಿಷಯ ವಿಶ್ಲೇಷಣೆ ಅಥವಾ ವ್ಯಾಖ್ಯಾನ ಸಂಬಂಧ ಲೇಖನಗಳು ಮುದ್ರಿತ ೩-೪ ಪುಟಗಳಿಗೆ ಮೀರಬಾರದು.
- ❖ ವಚನ ಸಾಹಿತ್ಯ ಅಥವಾ ಶರಣರ ಜೀವನವನ್ನು ಪ್ರತಿಬಿಂಬಿಸುವ ರೇಖಾ ಚಿತ್ರಗಳಿಗೆ ಅವಕಾಶವುಂಟು.
- ❖ ಶರಣ ಕ್ಷೇತ್ರ ಅಥವಾ ಶರಣ ಸಾಹಿತಿಗಳನ್ನು ಕುರಿತ ಲೇಖನಗಳೊಡನೆ ಸಂಬಂಧಪಟ್ಟ ಛಾಯಾಚಿತ್ರಗಳನ್ನು ಕಳುಹಿಸುವುದು ಅಪೇಕ್ಷಣೀಯ.
- ❖ ಲೇಖನಗಳನ್ನು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಬೇಕು; ಅಕ್ಷರಗಳು ಸ್ಫುಟವಾಗಿರಬೇಕು.
- ❖ ಆಧುನಿಕ ವಚನಕಾರರು ತಮ್ಮ ಹೊಸ ವಚನಗಳನ್ನು ಪ್ರಕಟಣೆಗೆ ಕಳುಹಿಸಬಹುದು.
- ❖ ಅಂಗೀಕೃತ ಲೇಖನ ಅಥವಾ ಚಿತ್ರಗಳಿಗೆ ಮಾತ್ರ ಸಾಂಕೇತಿಕ ಸಂಭಾವನೆ ನೀಡಲಾಗುವುದು.

## ಅನುಭವ ಮಂಟಪ

- ❑ ಮಹಾಮನೆಯ ಈ ಅಂಕಣದಲ್ಲಿ ಪ್ರಶ್ನೋತ್ತರಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇದೊಂದು ಮುಕ್ತ ವಿಚಾರ ವಿನಿಮಯ.
- ❑ ಪ್ರಶ್ನೆಗಳು ಗಂಭೀರವಾಗಿರಬೇಕು. ಮುಖ್ಯವಾಗಿ ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿರಬೇಕು. ಪ್ರಶ್ನೆಗಳು ಸ್ಪಷ್ಟ ಹಾಗೂ ಸಂಕ್ಷಿಪ್ತವಾಗಿರಬೇಕು.
- ❑ ವೈಯುಕ್ತಿಕ ವಿಷಯಗಳ ಪ್ರಸ್ತಾಪಕ್ಕೆ ಅವಕಾಶವಿಲ್ಲ. ಪ್ರಶ್ನೆಗಳಲ್ಲಿ ಸಾಮೂಹಿಕ ಹಿತದೃಷ್ಟಿಯಿರಬೇಕು.
- ❑ ವರ್ಷದ ಕೊನೆಯಲ್ಲಿ ಆಯ್ದ ಪ್ರಶ್ನೋತ್ತರಗಳ ಒಂದು ಸಂಗ್ರಹವನ್ನು ಗ್ರಂಥ ರೂಪದಲ್ಲಿ ತರುವ ವಿಚಾರವಿದೆ.
- ❑ ಶರಣ ಸಿದ್ಧಾಂತದ ತಾಂತ್ರಿಕ ಅಂಶಗಳಿಗೆ ಸಂಬಂಧಿಸಿದಂತೆಯೂ ಪ್ರಶ್ನೆಗಳನ್ನು ಕೇಳಬಹುದು.
- ❑ ಪ್ರಶ್ನೆಗಳನ್ನು ಒಂದು ಅಂಚೆ ಕಾರ್ಡಿನಲ್ಲಿ ಬರೆದು ಕಳುಹಿಸಿದರೆ ಸಾಕು. ಪ್ರಶ್ನೆ ಕೇಳುವವರು ತಮ್ಮ ಪೂರ್ಣ ಅಂಚೆ ವಿಳಾಸ ತಿಳಿಸಬೇಕು.

## ಗ್ರಂಥ ವಿಮರ್ಶೆ

- ● 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ ಮತ್ತು ಸಂಬಂಧಿಸಿದ ಹೊಸ ಪ್ರಕಟಣೆಗಳ ಸಾದರ ಸ್ವೀಕಾರಕ್ಕೆ ಅವಕಾಶವುಂಟು. ಅಂಕಣದ ಪ್ರಕಟಣೆಗೆ ಲೇಖಕರು / ಪ್ರಕಾಶಕರು ತಮ್ಮ ಕೃತಿಗಳ ಒಂದೊಂದು ಪ್ರತಿಯನ್ನು ಕಳುಹಿಸಬೇಕು.
- ● ವಿಮರ್ಶೆಗಾದರೆ ಪ್ರತಿಯೊಂದು ಕೃತಿಯ ಎರಡೆರಡು ಪ್ರತಿಗಳನ್ನು ಕಳುಹಿಸಬೇಕು. ಅಂತಹ ಕೃತಿಯ ಶೀರ್ಷಿಕಾ ಪುಟದಲ್ಲಿ "ವಿಮರ್ಶೆಯ ಕೃಪೆಗಾಗಿ" ಎಂದು ಬರೆದಿರಬೇಕು.

ವಿ. ಸೂ. ಲೇಖಕರು / ಪ್ರಕಾಶಕರು ಶರಣ ಸಾಹಿತ್ಯ ಪರಿಷತ್ತಿಗೆ ಕಳುಹಿಸುವ ಕೃತಿಗಳನ್ನು ಪರಿಷತ್ತಿನ ಸಾಹಿತ್ಯ ಭಂಡಾರದಲ್ಲಿಟ್ಟು ಓದುಗರಿಗೆ ಆಕರ ಸೌಲಭ್ಯ ಒದಗಿಸಲಾಗುತ್ತದೆ.

ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಯಾವುದೇ ಕೃತಿಯನ್ನು (ಹಳೆಯದಿರಲಿ, ಹೊಸದಿರಲಿ, ಹಸ್ತಪ್ರತಿಯಿರಲಿ) ಕೊಡುಗೆಯಾಗಿ ಶರಣ ಸಾಹಿತ್ಯ ಪರಿಷತ್ತಿನ ಭಂಡಾರಕ್ಕೆ ಕಳುಹಿಸಬಹುದು.

ಸಂಪರ್ಕ ವಿಳಾಸ : ಸಂಪಾದಕರು, 'ಮಹಾಮನೆ' ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಶಿವರಾತ್ರೀಶ್ವರ ಕೇಂದ್ರ, 1ನೆಯ ಮುಖ್ಯರಸ್ತೆ, 8ನೆಯ ವಿಭಾಗ, ಜಯನಗರ, ಬೆಂಗಳೂರು-560 082



# ಮಹಾಮನೆ

ಸಂಪುಟ : ೩ ಮಾರ್ಚಿ ೨೦೦೧ ಸಂಚಿಕೆ : ೮

**ಅಧ್ಯಕ್ಷರು**
ಗೊ. ರು. ಚನ್ನಬಸಪ್ಪ

**ಸಂಪಾದಕರು**
ಎಂ. ಜಿ. ನಾಗರಾಜ್
ಎಚ್. ಎಸ್. ಸಿದ್ಧಗಂಗಪ್ಪ

**ಪ್ರಕಾಶಕರು**
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

**ಆಡಳಿತ ಕಛೇರಿ**
ಶಿವರಾತ್ರೀಶ್ವರ ಕೇಂದ್ರ, ೧ನೆಯ ಮುಖ್ಯರಸ್ತೆ,
೮ನೆಯ ವಿಭಾಗ ಜಯನಗರ,
ಬೆಂಗಳೂರು-೮೨ ದೂರವಾಣಿ : ೬೫೪೮೯೩೮೪

**ಮುದ್ರಕರು**
ಗೀತಾಂಜಲಿ ಗ್ರಾಫಿಕ್ಸ್
ನಂ. ೨/೨, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ
ಬೆಂಗಳೂರು-೫೪, ದೂರವಾಣಿ : ೩೩೧೦೫೩೧

ಲೇಖಕರ ಅಭಿಪ್ರಾಯಗಳೆಲ್ಲ
ಪರಿಷತ್ತಿನ ಅಭಿಪ್ರಾಯಗಳಲ್ಲ

## ಬಾಗಿಲು ತೆರೆದರೆ ........

೨ ಸಂಪಾದಕೀಯ
೩ ಅಧ್ಯಕ್ಷರ ನುಡಿ
೪ ಶರಣ ಕಿರಣ – ಸಾವಿರದ ಪ್ರಶ್ನೋತ್ತರಗಳು
೫ ದ್ವಾಸುಪರ್ಣಾ
– ಶ್ರೀ ಸಿದ್ಧೇಶ್ವರ ಸ್ವಾಮಿಗಳು
೯ ಸಮಾಜ ಮತ್ತು ರಾಜಕೀಯ : ಭಾರತೀಯ ಸಂದರ್ಭದ ಸಮಾಜಶಾಸ್ತ್ರೀಯ ವಿಶ್ಲೇಷಣೆ
– ಡಾ॥ ವಿಘ್ನೇಶ್ ಎನ್. ಭಟ್
೧೫ ಶರಣರ ವಚನಗಳು
೧೬ ಆಧುನಿಕ ವಚನಗಳು
೧೭ ಕ್ಷೇತ್ರವಾರ್ತೆ
೨೩ ಒಂದು ಮನವಿ
೨೪ ಸಾದರ ಸ್ವೀಕಾರ

## 'ಮಹಾಮನೆ'ಯ ಬಾಗಿಲು ತೆರೆದರೆ.....

- * ಅಧ್ಯಕ್ಷರ ನುಡಿ, ಸಂಪಾದಕೀಯ ಬರಹಗಳು.
- * ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕೇಂದ್ರ ಚಟುವಟಿಕೆಗಳು
- * ಶರಣ ಸಾಹಿತ್ಯ ಕೃತಿಗಳು ಮತ್ತು ಶರಣ ಕ್ಷೇತ್ರಗಳ ಪರಿಚಯ
- * ಶರಣ ಸಾಹಿತ್ಯ ಕ್ಷೇತ್ರದಲ್ಲಿ ದುಡಿದ, ದುಡಿಯುತ್ತಿರುವ ಮಹನೀಯರ ಪರಿಚಯ.
- * ಆಯ್ದ ವಚನಗಳು ಮತ್ತು ಅವುಗಳ ವಿಶ್ಲೇಷಣೆ.
- * ಶರಣ ಸಾಹಿತ್ಯ - ಸಂಸ್ಕೃತಿಗಳಿಗೆ ಸಂಬಂಧಿಸಿದ ಹೊಸ ಶೋಧಗಳು
- * ಶರಣ ಸಾಹಿತ್ಯ ಕೃತಿಗಳ ಸಾದರಸ್ವೀಕಾರ ಮತ್ತು ವಿಮರ್ಶೆ
- * ಶರಣ ಸಾಹಿತ್ಯ ಕುರಿತ ಪ್ರೌಢ ಲೇಖನಗಳು.
- * ಆಧುನಿಕ ವಚನಕಾರರ ಹೊಸ ವಚನಗಳು.
- * ಓದುಗರೊಡನೆ ಸಂವಾದ-ಪ್ರಶ್ನೋತ್ತರ ವೇದಿಕೆ.
- * ಶರಣ ಸಿದ್ಧಾಂತದ ತಾಂತ್ರಿಕ ಅಂಶಗಳ ವ್ಯಾಖ್ಯಾನ-ಇತ್ಯಾದಿ.

# ಬುದ್ಧನ ಕ್ಷಮೆ – ಸಬಲ ಸ್ತ್ರೀಶಕ್ತಿ ವರ್ಷ....

ಅಂತರಿಕ ಸೊಬಗು ನಡವಳಿಕೆಯ ಹೆಜ್ಜೆಗಳಲ್ಲಿ ದನಿಯಾಡುವುದೇ ಸಂಸ್ಕೃತಿ. ಸಂಸ್ಕೃತಿ ಮಾಧುರ್ಯವನ್ನು ತೋರುತ್ತದೆ; ಲಾಲಿತ್ಯದಲ್ಲಿ ಲಾಸ್ಯವಾಡುತ್ತದೆ; ತಪ್ಪಿದಾಗ ಎಚ್ಚರಿಸುತ್ತದೆ. ಹಾಗೆಂದು ಕ್ಷಮೆಯಿಂದ ದೂರ ಸರಿಯುವುದಿಲ್ಲ. ಸಹನೆ, ಪಾತ್ರವರಿತು ಸ್ವೀಕಾರ, ಸಾಮರಸ್ಯಗಳಿಂದ ನೆರೆಹೊರೆಗೆ ನಂಟನ್ನು ಬೆಸೆಯುತ್ತದೆ. ಇತಿಹಾಸಕ್ಕೆ ಅಪಚಾರವೆಂದರೆ, ವರ್ತಮಾನದ ದುರಹಂಕಾರ ಭೂತವಾಗಿ ಕಾಡುತ್ತದೆ. ಕಾಡುವ ಬರ್ಬರತೆ. ಇಂದಿನ ದುರಹಂಕಾರ, ಅವಿವೇಕ, ಬರ್ಬರತೆಯಿಂದ ಮುಂದಿನ ತಲೆಮಾರು ಅನುಭವಿಸುವುದು ಸಾಂಸ್ಕೃತಿಕ ಅಂಗವಿಕಲತೆ. ರಾಕ್ಷಸ ಮನಸ್ಸಿಗೆ ದಮನಮಾಡಿಕೊಳ್ಳುವ ಶಕ್ತಿ ನಿಶ್ಯಕ್ತವಾದಾಗ, ಕ್ರೌರ್ಯದ ರೋಗದೆದುರು ನಿರೋಧಶಕ್ತಿಯೆ ನಲುಗಿ ಹೋಗುತ್ತದೆ. ಫಲವಾಗಿ ಪ್ರತಿಕ್ರಿಯೆಯ ಪ್ರಕ್ರಿಯೆ ಆರಂಭವಾದರೆ ರಕ್ಷಕ ಮನಸ್ಸುಗಳು ಮುಂದಾಗಿ ಒಡ್ಡುಗಳನ್ನು ನಿರ್ಮಿಸಬೇಕಾಗುತ್ತದೆ.

ಇಡೀ ವಿಶ್ವಪ್ರಜ್ಞೆ, ಎದ್ದು ಹೇಳಿದರೂ ಬುದ್ಧಪ್ರತಿಮೆಗಳ ಮೇಲೆ ತಾಲಿಬಾನ್ ಅತ್ಯಾಚಾರದ ಸವಾರಿ ವಿಜೃಂಭಿಸಿರುವುದು ದುರಂತ. ಪ್ರಜ್ಞೆ ಕೇವಲ ಪುಟವಿಟ್ಟರೆ ಸಾಲದು; ಗುದ್ದಬೇಕಾದಾಗ ಗುದ್ದಿದರೆ ಸಂಸ್ಕೃತಿಗೆ ಬದ್ಧವಾಗುವ ಎಚ್ಚರಬರುತ್ತದೆ. ಕಂಪಿಸಿದ ನೆಲ ತಡೆದಿದ್ದ ಕೋಪವನ್ನು ಕಕ್ಕುವಂತೆ, ವಿಶ್ವಮಾನವ ಪ್ರಜ್ಞೆ ಕಂಪಿಸತೊಡಗಿದರೆ, ದುರಹಂಕಾರಕ್ಕೆ ಆಗ ಮಂಗಳಾರತಿ; ಅದಕ್ಕೆ ಹೇಳಹೆಸರಿಲ್ಲದಂತೆ ಕುಸಿದು ಹೋಗುವ ಗತಿ ಒದಗೀತು. ಗಾಂಧಾರದಲ್ಲಿ ಹೀಗಾಗಬಾರದಿತ್ತು. ವಿಶ್ವದ ಇತಿಹಾಸದಲ್ಲಿ ಇಂಥ ಎಷ್ಟೋ ಕಪ್ಪು ದುರಂತಗಳು ನಡೆದುಹೋಗಿದ್ದರೂ, ಜನಮಾನಸದಲ್ಲಿ ಮಾನಿತಗೊಂಡು ಉಳಿದು ಬರುತ್ತಿರುವುದು ಸಾಂಸ್ಕೃತಿಕ ಸಹನೆ, ಸಂಸ್ಕೃತಿಯ ಉಪಚಾರವೇ ವಿನಾ ಸಾಂಸ್ಕೃತಿಕ ವ್ಯಭಿಚಾರವಲ್ಲ. ಇದು ಅರಿವಿಗೆ ಬರಬೇಕಾದರೆ ತಾಲಿಬಾನ್ ಮನಸ್ಸುಗಳ ಕಿಟಕಿ ತೆರೆದಾಗ ಮಾತ್ರ ಸಾಧ್ಯ. ಬುದ್ಧನ ಕ್ಷಮೆ ತಲೆಮಾರುಗಳ ನಿರಂತರದಿಂದ ಹರಿದ ಪ್ರವಾಹ. ಆ ಪ್ರವಾಹದಲ್ಲಿ ಮಿಂದು ಹದುಳವಾಗುವ ಮನಸ್ಸುಗಳು ಪಲ್ಲವಿಸಲಿ.

*ಕಾಲ ತಿಳಿಯದ ಕಾಲದಿಂದ ಬರಡಾಗಿತ್ತು*
*ಮರುಳು ಮಿಶ್ರಿತ ಕಛ್‌ನೆಲ*
*ನೆಲನಡುಗಿ ತಂದ ಬೆಂಕಿಯುಗುಳಿಗೆ*
*ತಾಂಡವದ ಮಾರುತನ ಹೆಜ್ಜೆಟ್ಟು ಗುರುತಿನ ಮಸಿಬಿದ್ದಿತ್ತು*
*ಮೊನ್ನೆ ತಾನೆ ಬಂದ ಸುದ್ದಿ, ನೆಲಕಂಪನದ ಬಿರುಕುಗಳಿಂದ ಚಿಮ್ಮಿಸಿದ*
*ಚಿಲುಮೆ ನೀರು ಕ್ಷಮೆಯಾಧರಿತ್ರಿಯ ಒಂದಿಷ್ಟು ಮಾನವೀಯತೆಗೆ ಸಾಕ್ಷಿ*
*ಇದ ಕೇಳಿ ಅಚಲ ದೇವನಾಗೊಡೆಯ ನುಡಿದ :*
*ತಾಲಿಬಾನವೆ ನೀನು ನೋಡು ನೋಡು ಧರಿತ್ರಿ, ರೀತಿ*
*ಅವಸರದಿ ಮತದ ಒತ್ತಡದಲ್ಲಿ ಮತಿಯ ಕುಯ್ಯದಿರು*
*ಬುದ್ಧನಾಶಿಲ್ಪ ಶರೀರವನು ಗುಂಡಿಟ್ಟು ಮಾಡಿದರೂ ಚೂರು*
*ಅವನ ಕ್ಷಮೆ ಕರುಣೆಗಳಲ್ಲಿ ಬಾಳಬೇಕಲ್ಲ ಮುಂದಿನಾ ನಿನ್ನ ತಲೆಮಾರು*
*ವಿಶ್ವಪ್ರಜ್ಞೆಯ ಸಾಕ್ಷಿ ನಿನಗಿಡುವ ಎಚ್ಚರಿಕೆ ಈ ತಾರು !*

★ ★ ★ ★ ★

ಹೆಣ್ಣು ಈ ನೆಲದ ವಿಕಸನಶಕ್ತಿ. ತಲೆಮಾರುಗಳಲ್ಲಿ ಕುಸಿದು ಹೋಗಿದ್ದ ಆಕೆಯ ನೆಲೆಗೆ ೧೧-೧೨ನೇ ಶತಮಾನಗಳಲ್ಲಿ ಮತ್ತೆ ಗಟ್ಟಿಯಾಗಲು ನಾಂದಿಬಿತ್ತು. ಆದರೂ ೨೦ನೇ ಶತಮಾನದಲ್ಲಿ ಅವಳ ಎಚ್ಚೆತ್ತ ಕೊರಳಿನ ದನಿ ಕರುಳಿನ ಬನಿಗೇ ಮಿತಿಗೊಳ್ಳಲಿಲ್ಲ. ಕೆಚ್ಚಿನ ಘನವಾಗಿ ಸಮುದಾಯದ ಮುಂದೆ ಅಂತರಾಷ್ಟ್ರೀಯ ಸಬಲತಾ ಮಹಿಳಾ ವರ್ಷದ ಸಂಕೇತಗಳನ್ನು ವರ್ತಮಾನದಲ್ಲಿ ತೋರಿ ನಿಲ್ಲುವಂತಿದೆ. ವೇದಕಾಲೀನ ಘೋಷಾ, ವಿಶ್ವವಾರಾ, ಶ್ರೇಷ್ಠವಿದುಷಿ ಯಾಜ್ಞವಲ್ಕನ ಮೋಕ್ಷಪತ್ನಿ ಮೈತ್ರೇಯೀ ಅವರನ್ನೆಲ್ಲ ಸಬಲ ಪುರುಷಪ್ರತಿಭಾ ಸಮ ಸಮನಾರಿಯರೆಂದದ್ದುಂಟು. ಮನುವಿನ ಕಾಲಕ್ಕೆ ಮಂಗಳೆಯರೆಲ್ಲ ಮ್ಲಾನವದನಿಗಳೆಂದುದುಂಟು. ಆ ಮನು ಪರಂಪರೆಯಲ್ಲೂ ಹೆಣ್ಣು ಕುರಿತ ದ್ವಂದ್ವ ಶ್ಲೋಕಗಳು ಹರಿದಾಡಿದ್ದುಂಟು. ಕೌರವಶಕ್ತಿಯನ್ನು ಮಣಿಸಿದ ದಿಟ್ಟೆ ದ್ರೌಪದಿಯಂಥವರು ಕ್ವಚಿತ್ ಸ್ತ್ರೀಸಬಲತೆಯ ಸಾಕ್ಷಿಯಾದರು. ಚಾಲುಕ್ಯ ಜಯಸಿಂಹನ ರಾಣಿ ಅಕ್ಕಾದೇವಿ, ಜೈನಶ್ರಾವಕಿ ಕ್ರಿ.ಪೂ. ೬ನೇ ಶತಮಾನದ ರಾಜಕನ್ಯೆ, ಚೋಳರ ಕ್ರಿ.ಶ. ೧೫೯ರ ಶಾತಕರ್ಣಿ, ಚುಟುಕುಲದ ಶಿವಸ್ಕಂದ ನಾಗಶ್ರೀ ಪ್ರಳಯಾಗ್ನಿಯೊಳಗಿದ್ದ ಅಹವಮಲ್ಲನ ಸೈನ್ಯವನ್ನು ರಕ್ಷಿಸಿದ ಅತ್ತಿಮಬ್ಬೆ. ಇವರೆಲ್ಲ ಒಂದು ರೀತಿ ಪೌರಾಣಿಕ ಹಾಗೂ ಇತಿಹಾಸದ ನಡೆಮುಡಿಯಲ್ಲಿ ಹಾದುಬಂದ ಶಿಷ್ಟ ಸ್ತ್ರೀಶಕ್ತಿಯ ಸಬಲ ಸಂಕೇತಗಳು. ಅಕ್ಕನಿಗೂ ಮುಂಚೆ ಬೀದರ್ ಜಿಲ್ಲೆಯ ವೀರಶಿವಶರಣ ಸಂಗಯ್ಯನ ಸತಿ ಚಂದ್ರಣಿ, ಮೋಹಭಾವದ ರಾಜ ಭಾಸ್ಕರನನ್ನು ಮಣಿಸಿ ಶಿವಭಕ್ತನನ್ನಾಗಿಸಿದ ಧೀರೆ. ಅಕ್ಕ, ಹೆಣ್ಣಿನ ಶತಶತಮಾನಗಳ ನೋವಿಗೆ ದನಿಗೊಟ್ಟ ಶೀಲೆ; ಅಲ್ಲಮನ ಅಧ್ಯಾತ್ಮಿಕ ಸವಾಲಿಗೆ ಅಳುಕದೆ ಉತ್ತರವಿಟ್ಟು ಒಪ್ಪಿಸಿದ ಅಧ್ಯಾತ್ಮಿಕ ಅಗ್ಗಳೆ. ಇದ್ದ ಕಡೆಯೆ ಸಂಗಮನಾಥನನ್ನು ಕಾಣುವ ನೀಲಾಂಬಿಕೆ, 'ಕಾವಿಯ ಹೊದ್ದು ತಿರುಗುವ ಜೀವಗಳ್ಳರು ವಿರಕ್ತರೆ?' ಎಂದು ಕೇಳುವ ಗಟ್ಟಿದನಿಯ ಅಮುಗೆ ರಾಯಮ್ಮ ಇವರೆಲ್ಲ ಎಚ್ಚೆತ್ತ ಅನುಭಾವಿಕ ಸ್ತ್ರೀ ಸಬಲಶಕ್ತಿಯ ಸಂಕೇತಗಳೇ ಆಗಿದ್ದಾರೆ. ಶಿವಾಜಿಯ ಸೈನ್ಯವನ್ನು ತನ್ನ ಸ್ತ್ರೀ ಪಡೆಯಿಂದ ಮಣಿಸಿದ ಬೆಳವಡಿಮಲ್ಲಮ್ಮ, ಹೋರಾಟದ ಕೆಚ್ಚಿಗೆ ಶ್ರೇಷ್ಠ ಐತಿಹಾಸಿಕ ಸಾಕ್ಷಿ. ಮೀಸಲಾತಿ ಹೋರಾಟದ ವೇದಿಕೆಗೆ ಗೊಡ್ಡು ಸಂಕೇತವಾಗಬಾರದು. ಚೈತ್ರದ, ಚೈತನ್ಯದ ಪಲ್ಲವಕ್ಕೇ ಪುರುಷ ವರ್ತಮಾನದಲ್ಲಿ ಸಾಮರಸ್ಯ ಸಹನೆಯ ಜಲಧಾರೆ ಹರಿಸಿ ನಿರ್ಝರತ್ತಿನ ಸ್ವಾಗತ ನೀಡಬೇಕಾಗಿದೆ ! ವೃಷಸಂವತ್ಸರವನ್ನು ಸ್ವಾಗತಿಸುವ ಚೈತ್ರದ ಉಗಾದಿ ಸಬಲ ಸ್ತ್ರೀಶಕ್ತಿಯನ್ನೇ ಪಲ್ಲವಿಸುವಂತಹ ಘಳಿಗೆಗಳನ್ನು ಮುದವಾಗಿ ನೀಡಲಿ (೨೫.೩.೨೦೦೧). ಅಂದೇ ಅಲ್ಲಮಪ್ರಭುವಿನ ಜಯಂತಿ. ಅಲ್ಲಮ, ಅಕ್ಕನನ್ನು ಮುಕ್ತಾಯಕ್ಕನನ್ನು ಅಧ್ಯಾತ್ಮಿಕವಾಗಿ ಗೌರವಿಸಿದಂತೆ ವಿಶ್ವಗೌರವ ಸ್ತ್ರೀಕುಲಕ್ಕೆ ವರ್ತಮಾನದಲ್ಲಿ ಸಂದಾಯವಾಗಲಿ.

*'ಶಕ್ತಿ' ನೀ ಹೆಣ್ಣಲ್ಲವೆ? ಹೆಣ್ಣೇ ನೀ ಶಕ್ತಿ ಅಲ್ಲವೆ!*
*ವಾದದಂತರಾಳದಲ್ಲಿ ಮಲಗಿದ್ದ ಪ್ರಶ್ನೆ*
*ಧುತ್ತೆಂದು ಎದ್ದಾಗ ಸತಿಪತಿಯ ಸಾಮರಸ್ಯ*
*ವೆಂಬುದು ಸಂಪ್ರದಾಯ ನಂಟಿನ ಮಾತು.*
*ಗಂಡಹೆಂಡಿರ ಬದುಕು ಬಂಡಿಯ ಚಲನೆ*
*ಅಲ್ಲ ಬದುಕಿನಾಕತೆಗೆ ಅಡ್ಡವಾಗುವ ರಸಹೀನ*
*ಟಿ.ವಿ. ಜಾಹಿರಾತಿನ ಚಲನವಲನ ಎಂದ*
*ಅಚಲದೇವನಾಗೊಡೆಯ*
*ಬಾಳು ಗಂಡು-ಹೆಣ್ಣಿನ ಸಂಘರ್ಷ-ಸಿಂಗಾರಗಳ ಕತೆ ಎಂದ.*

ಎಂ.ಜಿ. ನಾಗರಾಜ್
ಎಚ್.ಎಸ್. ಸಿದ್ದಗಂಗಪ್ಪ







# ವಿಶ್ರಾಂತಿಗೆ ವಿಶ್ರಾಂತಿ !

ಜನಸಮುದಾಯದ ಮಧ್ಯೆಯೇ ಇದ್ದುಕೊಂಡು ಅವರ ನೋವು-ನಲಿವುಗಳನ್ನು ಹಂಚಿಕೊಂಡಿದ್ದ ವ್ಯಕ್ತಿ ತಾನೇ ನೋವು ಅನುಭವಿಸುವಾಗ, ತಾನೇ ಏಕಾಂಗಿಯಾದಾಗ ಪಡೆಯುವ ಅನುಭವವೇ ಬೇರೆ. ಕಳೆದ ಎರಡು ತಿಂಗಳಿಂದ ನನಗೆ ಆ ಅನುಭವ ಉಂಟಾಗಿದೆ. ದೈಹಿಕ ಮತ್ತು ಮಾನಸಿಕ ನೋವಿನ ಅನುಭವ ನನಗೆ ಹೊಸತೇನೂ ಅಲ್ಲ. ನೋವುಣ್ಣುತ್ತಲೇ ನಿಮ್ಮೊಡನೆ ನಗುತ್ತ ಬಂದಿದ್ದೇನೆ. ಆದರೆ ಈ ಸಲದ ಅನುಭವ ಹೊಸದು.

ವೈದ್ಯರ ಸಲಹೆಯಂತೆ ನಾನು ಒಂದೆರಡು ವಾರ ವಿಶ್ರಾಂತಿ ಪಡೆಯಬೇಕಾಗಿತ್ತು. ಆದರೆ ವಿಶ್ರಾಂತಿಯ ಮೊದಲ ದಿನವೇ ನನ್ನ ಕಾಲಿಗೆ ಒಂದು ಸಣ್ಣ ಆಘಾತವುಂಟಾಯಿತು. ಉಂಟಾಯಿತು ಎನ್ನುವುದಕ್ಕಿಂತ ನಾನೇ ಗಂಟುಹಾಕಿಕೊಂಡೆನೆಂದು ಕಾಣುತ್ತದೆ. ವೈದ್ಯರು ಸಲಹೆಮಾಡಿದ್ದ ಒಂದು ಸಾಮಾನ್ಯ ದೈಹಿಕ ವ್ಯಾಯಾಮ ಮಾಡುತ್ತಿದ್ದಾಗ ನನ್ನ ಬಲಗಾಲು ಹೊರಳಿ ಹೆಜ್ಜೆಯ ಎಲುಬೊಂದು ಮುರಿದು ಹೋಯಿತು. ನನ್ನ ವಿಶ್ರಾಂತಿಗೇ ವಿಶ್ರಾಂತಿ ದೊರಕಿತು.

ಸರಿ ಮತ್ತೆ ವೈದ್ಯರ ಬಳಿಗೆ ಹೋದೆ. ಕೀಲು-ಮೂಳೆಗಳ ಆ ತಜ್ಞವೈದ್ಯರು ನನ್ನ ಕಾಲಿಗೆ ಕಟ್ಟಿನ ಪಟ್ಟಿ ಹಾಕಿದರು. 'ವಯಸ್ಸಾದವರಿಗೆ ಇದು ಸಾಮಾನ್ಯ. ಎಚ್ಚರಿಕೆಯಿಂದರಬೇಕು' ಎಂದು ಸಮಾಧಾನ ಹೇಳಿದರು. ನಾನೀಗ ಆ ಕಾಲುಪಟ್ಟಿಯಲ್ಲೇ ಹಾಸಿಗೆ ಹಿಡಿದಿದ್ದೇನೆ. 'ಅಧ್ಯಕ್ಷರು ಕಾಲು, 'ಮುರಿದು' ಕೊಂಡಿದ್ದಾರೆ' ಎಂದು ಪರಿಷತ್ತಿನ ಪದಾಧಿಕಾರಿಗಳು ಆಗಾಗ ನೋಡಲು ಬರುತ್ತಿದ್ದಾರೆ. ಪರಿಚಿತರೂ ಬಂದು ಹೋಗುತ್ತಿದ್ದಾರೆ. ಆತ್ಮೀಯರೊಬ್ಬರು ನನ್ನ ಸ್ಥಿತಿಯನ್ನು ಕಂಡು ''ಒಳ್ಳೆಯದೇ ಆಯಿತು ! ಈ ನೆಪದಲ್ಲಿ ನೀವು ವಿಶ್ರಾಂತಿ ಪಡೆಯುವಂತಾಯಿತು'' ಎಂದರು.

ಆದರೆ ವಿಶ್ರಾಂತಿಗೆ ಅರ್ಥಬರುವುದು ನಮ್ಮ ಆರೋಗ್ಯ ಚೆನ್ನಾಗಿದ್ದಾಗ ಮಾತ್ರ. ಅದು ಅನುಭವಿಸಿದರೇ ತಿಳಿಯುವುದು. ಅಸ್ವಸ್ಥನಾದ ನನಗೆ ವಿಶ್ರಾಂತಿಯೆಲ್ಲಿ? ವೈದ್ಯರು ಕಾಲುಪಟ್ಟಿ ತೆಗೆಯಲು ಆರು ವಾರಗಳಾಗಬೇಕು ಎಂದಿದ್ದರು. ಅವರು ಹೇಳಿದ ಅವಧಿ ಮುಗಿದರೂ ನನ್ನ ಕಾಲು 'ದುರಸ್ತಿ'ಯಾದಂತೆ ಕಾಣುವುದಿಲ್ಲ. ಇನ್ನೂ ಕೆಲವು ವಾರಗಳು ಬೇಕಾಗಬಹುದೆಂಬುದು ವೈದ್ಯರ ಅಭಿಪ್ರಾಯ. ಮತ್ತೆ ಎಂದಿನಂತೆ ನಡೆದಾಡಬೇಕೆಂದರೆ ವೈದ್ಯರ ಕಾಲುಪಟ್ಟಿ ತೊಟ್ಟಿರಲೇಬೇಕಾಗಿದೆ. ಅವರ ಸೂಚನೆಯನ್ನು ಪಾಲಿಸಲೇಬೇಕು. ಬೇರೆ ದಾರಿಯಿಲ್ಲ; ಪಾಲಿಸುತ್ತಿದ್ದೇನೆ.

ಹತ್ತು ಜನರಿಗೆ ಸಂಬಂಧಿಸಿದ 'ಮಹಾಮನೆ'ಯಲ್ಲಿ ಈ ವೈಯಕ್ತಿಕ ಸಂಗತಿಯ ಪ್ರಸ್ತಾಪವೇಕೆ ಎಂಬ ಪ್ರಶ್ನೆ ಏಳಬಹುದು. ಆ ಹತ್ತು ಜನರಲ್ಲಿ ನಾನೂ ಒಬ್ಬನಾದ ಕಾರಣ ಪ್ರಸ್ತಾಪಿಸಿದ್ದೇನೆ. ಮುಖ್ಯವಾಗಿ ಪರಿಷತ್ತಿನ ನಿತ್ಯದ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗದಂತ ಅಸಹಾಯ ಪರಿಸ್ಥಿತಿಗೆ ನೊಂದು ಬರೆಯುತಿದ್ದೇನೆ. ಮನೆಯಲ್ಲೇ ಇದ್ದುಕೊಂಡು ಕಾರ್ಯಾಲಯದ ಸಣ್ಣಪುಟ್ಟ ಪತ್ರವ್ಯವಹಾರ ನೋಡಿಕೊಳ್ಳುತ್ತಿದ್ದರೂ ದೈಹಿಕವಾಗಿ ಮತ್ತಿನ್ನೇನು ಮಾಡಲು ಆಗದಿರುವುದು ವ್ಯಕ್ತಿ ಸಹಜ ವ್ಯಥೆಯುಂಟುಮಾಡಿದೆ.

ಆಗೀಗ ಬಂದು ಕೆಲವು ಅಭಿಮಾನಿಗಳು ನನ್ನ ಕ್ಷೇಮ ವಿಚಾರಿಸಿಕೊಂಡು ಹೋಗುತ್ತಿರುವುದನ್ನು ಬಿಟ್ಟರೆ, ನಾನೀಗ ಒಂದು ರೀತಿಯಲ್ಲಿ ಏಕಾಂಗಿ ! ಹಗಲು-ರಾತ್ರಿಯೆನ್ನದೆ ಸದಾ ಹಾಸಿಗೆಯಲ್ಲಿರುವುದೆಂದರೆ ಅದು ಶಿಕ್ಷೆಯಲ್ಲದೆ ಬೇರೆ ಅಲ್ಲ. ಆದರೆ, ಇದು ಸ್ವಯಂಕೃತ ಶಿಕ್ಷೆ !

ಆದರೂ ನಾನದನ್ನು ಶಿಕ್ಷೆ ಎಂದು ಪರಿಗಣಿಸಿಲ್ಲ. ನನ್ನನ್ನು ನಾನೇ ಅಂತರ್ಮುಖಿಯಾಗಿ ನೋಡಿಕೊಳ್ಳುವ ಒಂದು ಪರೀಕ್ಷೆ ಎಂದು ಭಾವಿಸಿದ್ದೇನೆ. ಈ ಪರೀಕ್ಷೆಯಲ್ಲಿ ಉತ್ತೀರ್ಣತೆ- ಅನುತ್ತೀರ್ಣತೆಗಳ ಫಲಿತಾಂಶದ ನಿರೀಕ್ಷೆಯೂ ನನಗಿಲ್ಲ. ಈ ಪರೀಕ್ಷೆ ಎದುರಿಸಿದರೆ ಸಾಕು.

ವೃದ್ಧಾಪ್ಯದಲ್ಲಿ ದೇಹಕ್ಕೆ ಆಗುವ ಅಪಘಾತಗಳು ಸಾಕಷ್ಟು ನೋವು ಕೊಡುತ್ತವೆ. ಅದಕ್ಕೆ ಕಾರಣ ದೇಹದ ಧಾರಣಶಕ್ತಿ ಕುಂದಿರುವುದು. ಕೆಲವು ವೇಳೆ ತನು ಶಕ್ತಿ ಕುಂದಿದಾಗ ಮನಶಕ್ತಿಯೂ ಕುಂದಿಬಿಡುತ್ತದೆ. ನಾನೀಗ ಈ ಉಭಯ ಅಶಕ್ತಿಗಳಿಗೂ ಆಶ್ರಯ ನೀಡಿದ್ದೇನೆ. ಎಪ್ಪತ್ತು ಕಳೆದು ಇನ್ನು ಒಪ್ಪತ್ತಷ್ಟೇ ಉಳಿದಿರುವ ನನ್ನಂಥವರು ಮತ್ತಿನ್ನೇನು ಮಾಡಲಾದೀತು? ಸುಮ್ಮನೆ ಅನುಭವಿಸುವುದು, ನೆಮ್ಮದಿಯ ಅಂತ್ಯವನ್ನು ನಿರೀಕ್ಷಿಸುವುದು.

ಬೆಂಗಳೂರಿನಲ್ಲಿ **'Live well-leave well Society'** ಎಂಬ ಒಂದು ಸಂಸ್ಥೆಯಿದೆ. ಆ ಸಂಸ್ಥೆಯ ಸಹಯೋಗದಲ್ಲಿ ನಮ್ಮ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು 'ನೆಮ್ಮದಿಯಿಂದ ಬದುಕಿ-ನೆಮ್ಮದಿಯಿಂದ ನಿರ್ಗಮಿಸಿ' ಎಂಬ ವಿಷಯ ಕುರಿತು 'ಮರಣವೇ ಮಹಾನವಮಿ' ಎಂಬ ಶೀರ್ಷಿಕೆಯಲ್ಲಿ ಆರೇಳು ಕಡೆ ಚಿಂತನ ಸಂಕಿರಣ ನಡೆಸಿದೆ. ಈ ಸಂಕಿರಣಗಳ ಆಶಯವಿಷ್ಟೆ: ''ಹುಟ್ಟು-ಸಾವುಗಳು ಸೃಷ್ಟಿಯ ನಿಯಮ. ಹುಟ್ಟು ಎಷ್ಟು ಆಕಸ್ಮಿಕವೋ, ಸಾವು ಅಷ್ಟೇ ನಿಶ್ಚಿತ. ಹುಟ್ಟು-ಸಾವುಗಳ ಪರಿಚಕ್ರದಲ್ಲಿ ನಾವು ಸಿಲುಕಿರುವುದಂತೂ ನಿಜ. ಆದರೆ ಇವೆರಡರ ಮಧ್ಯೆ ಇರುವ ಬದುಕಿನ ಆಗು-ಹೋಗುಗಳಿಗೆ ನಾವೇ ಹೊಣೆ. ಮಾನವನ ಬದುಕು ಬೇರಾವ ಜೀವಿಗೂ ದೊರಕದ ಒಂದು ವಿಶಿಷ್ಟ ಅವಕಾಶ. ಈ ಬದುಕು ಸಹನೀಯವಾಗಿರಬೇಕು, ಸಾರ್ಥಕವಾಗಿರಬೇಕು. ಹಾಗೆಯೇ ಇರುವಾಗ ಸುತ್ತಮುತ್ತಣ ಪರಿಸರಕ್ಕೆ ಬೇಕಾಗಿ, ನಿಶ್ಚಿತವೆನಿಸಿರುವ ಸಾವನ್ನು ಸ್ವಾಗತಿಸಲು ಸಿದ್ಧವಾಗಬೇಕು. ಒಂದು ವೇಳೆ ನಮ್ಮ ದೇಹ ಅತ್ಯಂತ ದುರ್ಬಲಗೊಂಡು, ಅಸಹನೀಯ ನೋವಿಗೆ ಈಡಾದಾಗ, ಇನ್ನು ಜೀವ ಉಳಿಯುವುದೇ ಸಾಧ್ಯವಿಲ್ಲ ಎಂದಾಗ ಆ ನೋವಿನಿಂದ ಬಿಡುಗಡೆಯನ್ನು ಹೊಂದಿ ನೆಮ್ಮದಿಯಿಂದ ನಿರ್ಗಮಿಸಲು ಅವಕಾಶ ವಿರಬೇಕು. ಅಷ್ಟೇ ಅಲ್ಲ, ಜೀವ ಹೋದ ಮೇಲೂ ನಮ್ಮ ದೇಹ ಅಗತ್ಯವಿರುವವರಿಗೆ ಬಳಕೆಯಾಗಲು 'ದೇಹದಾನ'ದ ಇಚ್ಛಾಪತ್ರ ಬರೆದಿಡಬೇಕು'' – ಈ ಬಗೆಗೆ ಸಾರ್ವತ್ರಿಕ ಪ್ರಜ್ಞೆಮೂಡಿಸುವುದು.

**Live Well – Leave Well Society**ಯ ಬಂಧುಗಳೆಲ್ಲ ಇಂತಹ ಮಾನಸಿಕ ಸಿದ್ಧತೆಮಾಡಿಕೊಂಡಿರುವವರೇ. ನಾನೂ ಆ ಸೊಸೈಟಿಯ ಪೋಷಕ ಸದಸ್ಯ. ನಾವು ನಡೆಸುವ ಚಿಂತನ ಸಂಕಿರಣಗಳ ವೇದಿಕೆಯಲ್ಲಿ ಆಡುತ್ತಿದ್ದ ನುಡಿಗಳಿಗೆ ತಕ್ಕಂತೆ ನಡೆಯುವ ಸಂಕಲ್ಪ ನನ್ನ ಈಗಿನ ನೋವು ಮತ್ತೂ ಏಕಾಂಗಿತನಗಳಿಂದ ಹೆಚ್ಚು ದೃಢಗೊಂಡಿದೆ.

ಶರಣರು ಹೇಳುವ 'ಮರಣವೇ ಮಹಾನವಮಿ' ಎನ್ನುವ ಮಾತು ಎಷ್ಟು ಅರ್ಥಪೂರ್ಣ !

ಕಂತು -೧೧

## ಸಾವಿರದ ಪ್ರಶ್ನೋತ್ತರಗಳು

೧೭೫. ಶಿವ ಶರಣರ ಮಂತ್ರ ಯಾವುದು?
'ನಮಃ ಶಿವಾಯ' ಪಂಚಾಕ್ಷರ ಮಂತ್ರ;
'ಓಂ ನಮಃ ಶಿವಾಯ' ಷಡಕ್ಷರ ಮಂತ್ರ.

೧೭೬. ಅಷ್ಟಾವರಣಗಳಲ್ಲಿ 'ಪಾದೋದಕ'ದ ಪಾತ್ರವೇನು?
ಪಾದೋದಕ್ಕೆ 'ಚಿದ್ರಸ' ಎಂದೂ ಕರೆಯುತ್ತಾರೆ. ಪಾದ ಗುರುವನ್ನೂ ಉದಕ ಶಿಷ್ಯನನ್ನೂ ಸಂಕೇತಿಸುತ್ತದೆ.

೧೭೭. ಪಾದೋದಕದಲ್ಲಿ ಎಷ್ಟು ಬಗೆ?
ಗುರು ಪಾದೋದಕ, ಲಿಂಗೋದಕ ಮತ್ತು ಜಂಗಮೋದಕ. ದೀಕ್ಷಾ, ಶಿಕ್ಷಾ ಮತ್ತು ಜ್ಞಾನ ಪಾದೋದಕಗಳೆಂದೂ ಕರೆಯುತ್ತಾರೆ.

೧೭೮. ಅಷ್ಟಾವರಣಗಳಲ್ಲಿ 'ಪ್ರಸಾದ'ದ ಪಾತ್ರವೇನು?
ಭಕ್ತ ಶಿವನಿಗೆ ಅರ್ಪಿಸಿದ ಪದಾರ್ಥ ಪ್ರಸಾದವೆನಿಸಿಕೊಳ್ಳುತ್ತದೆ. ಅದು ಅವನ ಮನಸ್ಸಿಗೆ ಪ್ರಸನ್ನತೆ ತಂದುಕೊಡುತ್ತದೆ. ಶರಣರು ಒಕ್ಕುಮಿಕ್ಕದ್ದು ಪ್ರಸಾದವೆನ್ನುತ್ತಾರೆ.

೧೭೯. ಪ್ರಸಾದದಲ್ಲಿ ಎಷ್ಟು ವಿಧ? ಅವು ಯಾವುವು?
ಶುದ್ಧ ಪ್ರಸಾದ, ಸಿದ್ಧ ಪ್ರಸಾದ, ಮತ್ತು ಪ್ರಸಿದ್ಧ ಪ್ರಸಾದ ಎಂದು ತ್ರಿವಿಧ ಪ್ರಸಾದಗಳಿವೆ.

೧೮೦. ತ್ರಿವಿಧ ಪ್ರಸಾದಗಳು ದೊರೆಯುವುದು ಯಾರಿಂದ?
ಶುದ್ಧಪ್ರಸಾದ– ಗುರುವಿನಿಂದ; ಸಿದ್ಧಪ್ರಸಾದ– ಲಿಂಗದಿಂದ ಮತ್ತು ಪ್ರಸಿದ್ಧ ಪ್ರಸಾದ – ಜಂಗಮದಿಂದ.

೧೮೧. ದೀಕ್ಷೆ ಎಂದರೇನು?
ಅಂಗಕ್ಕೆ ನೀಡುವ ಲಿಂಗ ಸಂಸ್ಕಾರ.

೧೮೨. ದೀಕ್ಷೆಯಲ್ಲಿ ಎಷ್ಟು ವಿಧ? ಅವು ಯಾವುವು?
ಮಂತ್ರ ದೀಕ್ಷೆ, ಕ್ರಿಯಾ ದೀಕ್ಷೆ ಮತ್ತು ವೇಧಾ ದೀಕ್ಷೆ.

೧೮೩. ತ್ರಿವಿಧ ದೀಕ್ಷೆಗಳ ಅನ್ವಯ ಹೇಗೆ?
ಕಾಯಕ್ಕೆ ಮಂತ್ರ ದೀಕ್ಷೆ, ಪ್ರಾಣಕ್ಕೆ ಕ್ರಿಯಾ ದೀಕ್ಷೆ, ಮನಕ್ಕೆ ವೇಧಾ ದೀಕ್ಷೆ.

೧೮೪. ಆಧ್ಯಾತ್ಮದಲ್ಲಿ ಹೇಳಲಾಗುವ ತ್ರಿಮಲಗಳಾವುವು?
ಆಣವ, ಮಾಯಾ ಮತ್ತು ಕಾರ್ಮಿಕ.

೧೮೫. ದೀಕ್ಷಾ ಸಂಸ್ಕಾರದ ಉದ್ದೇಶವೇನು?
ಸಾಧಕನ ತ್ರಿಮಲಗಳನ್ನು ಕಳೆಯುವುದು; ಅವನಲ್ಲಿ ಜೀವನ ಶಿಸ್ತು ಮೂಡಿಸುವುದು.

೧೮೬. 'ಗುರು'ವಿನ ಮಹತ್ವಕ್ಕೆ ಒಂದು ವಚನ :

*ಎನ್ನ ತನುವ ಶೋಧಿಸಿ ಚಿನುಮಯ ಲಿಂಗವ ಮಾಡಿ*
*ತೋರಿದನಯ್ಯ ಸದ್ಗುರು;*
*ಎನ್ನ ಮನವ ಶೋಧಿಸಿ ಮನಘನ ಲಿಂಗವ ಮಾಡಿ*
*ತೋರಿದನಯ್ಯಾ ಸದ್ಗುರು;*
*ಎನ್ನ ಭಾವವ ಶೋಧಿಸಿ ಭವಭರಿತ ಲಿಂಗವ ಮಾಡಿ*
*ತೋರಿದನಯ್ಯ ಸದ್ಗುರು*
*ಎನ್ನ ಅಂಗ ಕರಣಂಗಳ ಕಳೆದು ಲಿಂಗ ಕರಣಂಗಳ*
*ಮಾಡಿದ ಸದ್ಗುರುವಿಂಗೆ ನಮೋ ನಮಃ ಎಂಬೆನಯ್ಯ*
*ಅಖಂಡೇಶ್ವರಾ.*

*– ಷಣ್ಮುಖಸ್ವಾಮಿ*

೧೮೭. 'ಲಿಂಗ' ಮಹತ್ವಕ್ಕೆ ಒಂದು ವಚನ :

*ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ*
*ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ*
*ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮಕುಟ*
*ಅಗಮ್ಯ ಅಗೋಚರ ಅಪ್ರತಿಮ ಲಿಂಗವೇ*
*ಕೂಡಲಸಂಗಮದೇವಯ್ಯ*
*ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ.*

*– ಬಸವಣ್ಣ*

೧೮೮. 'ಜಂಗಮ' ಮಹತ್ವಕ್ಕೆ ಒಂದು ವಚನ :

''ಜಂಗಮದನುವನರಿಯದಿರ್ದೊಡೆ ಲಿಂಗತನು
ತನಗೆಲ್ಲಿಯದೋ?
ಲಿಂಗವಿಪ್ಪ ಸಜ್ಜೆಯಲ್ಲಿ ಜಂಗಮ; ಜಂಗಮದ
ಪ್ರಾಣವೆಲ್ಲ ಲಿಂಗವು.
ರೇಕಣ್ಣಪ್ರಿಯ ನಾಗಿನಾಥ ಜಂಗಮದ ಕಾಯವ
ತೊಟ್ಟು ಸುಳಿವನಾಗಿ''

– ಬಹುರೂಪಿ ಚೌಡಯ್ಯ

(ಮುಂದುವರೆಯುವುದು)







## ದ್ವಾಸುಪರ್ಣಾ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು
ಜ್ಞಾನಯೋಗಾಶ್ರಮ, ವಿಜಾಪುರ

ನೂರಾರು ಜನ ಸಂತರು ಶರಣರು ದೇವನನ್ನು ವರ್ಣಿಸಿದ್ದಾರೆ; ದೇವನನ್ನು ನೇರವಾಗಿ ವರ್ಣಿಸುವ ಬದಲು ಉಪಮೆ, ದೃಷ್ಟಾಂತಗಳಿಂದ ಕೇಳುಗನ ಮನಸ್ಸಿನ ಮೇಲೆ ಬಿಂಬಿಸುವಂತೆ ಉಪದೇಶಿಸಿದ್ದಾರೆ. ಹೇಳುವ ಮಾತು ಕೇಳುಗನ ಮನಸ್ಸಿನ ಮೇಲೆ ಸ್ಪಷ್ಟವಾಗಿ ಮೂಡಬೇಕಾದರೆ, ಈ ಅಲಂಕರಣದ ಭಾಷೆ ಅವಶ್ಯ! ಉದಾಹರಣೆಗಾಗಿ ಶಂಕರಾಚಾರ್ಯರಿಗೆ ಜಗತ್ತು ಮಿಥ್ಯೆಯಾಗಿದೆ ಎಂದು ಕಂಡು ಬಂತು. ಆದರೆ ಅದನ್ನು ತಿಳಿಸುವುದು ಹೇಗೆ? ಒಂದು ವಸ್ತು ಸತ್ಯವಾದರೂ ಆಗಿರಬೇಕು. ಅಸತ್ಯವಾದರೂ ಆಗಿರಬೇಕು. ಎರಡೂ ಅಲ್ಲ ಎನ್ನುವುದನ್ನು ತಿಳಿಸುವುದು ಹೇಗೆ? ಅಂಥ ಕಲ್ಪನೆ ಹೇಗೆ ಮಾಡುವುದು? ಅದಕ್ಕಾಗಿ ಅವರು ದೃಷ್ಟಾಂತ ರೂಪಕ ಬಳಸಿದರು. ಅದೇ ಹಗ್ಗ-ಹಾವು. ಹಗ್ಗದಲ್ಲಿ ಹಾವಿನ ಭಾಸ. ಭ್ರಾಂತಿಯ ಹಾವಿನ ಅಸ್ತಿತ್ವ ಎಂಥದು? ಅದು ಹಗ್ಗದಂತೆ ಸತ್ಯವಲ್ಲ. ಎಂದೂ ಇಲ್ಲದ ವಸ್ತುವಿನಂತೆ ಅಸತ್ಯವಲ್ಲ. ಅಂದರೆ ಹಾವು ಸದಸತ್-ವಿಲಕ್ಷಣ. ಹಾಗೆ ಜಗತ್ತಿನ ಅಸ್ತಿತ್ವವೂ ಸಹ. ಈ ದೃಷ್ಟಾಂತವು ಸೂಕ್ಷ್ಮ ಕಲ್ಪನೆಯನ್ನು ಸ್ಫುಟಗೊಳಿಸುತ್ತದೆ.

ಅಸತ್ಯ ಎಂದರೆ ಎಂದೂ ಇಲ್ಲದಿರುವುದು. ಉದಾ: ಗೋಲಾದ ಚೌಕ. ಚೌಕಾದ ತ್ರಿಕೋನ ಇತ್ಯಾದಿ. ಗೋಲಾದ ಚೌಕ ಅನ್ನುವುದು ಶಬ್ದ ಮಾತ್ರ, ವಸ್ತು ಶೂನ್ಯ. ಕೇವಲ ವಿಕಲ್ಪ. ಶಾಬ್ದಿಕ ಅರ್ಥ ಇದೆ. ಆದರೆ ವಸ್ತು ಇಲ್ಲ. ಶಬ್ದಕ್ಕೆ ಅರ್ಥ ಇದೆ. ಭಾವಕ್ಕೆ ನಮಗೆ ಬರುವುದಿಲ್ಲ. ವಸ್ತು ಅಲ್ಲಿ ಇಲ್ಲ. ವಸ್ತು ಇರದೆ ಕೇವಲ ಶಾಬ್ದಿಕವಾಗಿ ಒಂದು ವಸ್ತು ಇದ್ದರೆ ಅದು ಅಸತ್ಯ. ಹಾವು ಹಾಗೆ ಅಸತ್ಯವಲ್ಲ. ಅದು ಕಾಣುತ್ತದೆ. ಆದರೆ ಸ್ಫುಟವಾದ ದೃಶ್ಯ ವಸ್ತುಗಳಂತೆ ಸತ್ಯವೂ ಅಲ್ಲ.

ಈ ಜಗತ್ತು ಸತ್ಯವೂ ಅಲ್ಲ, ಅಸತ್ಯವೂ ಅಲ್ಲ. ಈ ಜಗತ್ತು ಸಂಪೂರ್ಣವಾಗಿ ಇಲ್ಲ ಎಂದಲ್ಲ, ಅಥವಾ ಶಾಶ್ವತವಾಗಿ ಇದೆ ಎಂತಲೂ ಅಲ್ಲ. ಸತ್=ಶಾಶ್ವತ ವಸ್ತು ಅಲ್ಲದ್ದರಿಂದ ಸದ್ ವಿಲಕ್ಷಣ. ಇಲ್ಲದ ವಸ್ತುವಿನಂತೆ ಇಲ್ಲವಾದುದಲ್ಲವಾದುದರಿಂದ ಅಸದ್ ವಿಲಕ್ಷಣ. ಹಾಗೆ ಸತ್ಯಕ್ಕೆ ಅಸತ್ಯಕ್ಕೆ ವಿಲಕ್ಷಣವಾದ ಅಸ್ತಿತ್ವವನ್ನು ಶಂಕರರು ಜಗತ್ತಿಗೆ ಕಲ್ಪಿಸಿದರು. ಈ ಅಸ್ತಿತ್ವವನ್ನು ನಮ್ಮ ಗಮನಕ್ಕೆ ತರುವುದಕ್ಕಾಗಿ ಯೋಗ್ಯ ಹಾಗೂ ಸಮರ್ಥ ದೃಷ್ಟಾಂತ ಬಳಸಿದರು. ಈ ಜಗತ್ತು ಬರೀ ತೋರಿಕೆಯಲ್ಲಿದೆ ನೈಜವಾಗಿಲ್ಲ ಎಂಬ ಮಾತನ್ನು ಮನ ಮುಟ್ಟುವ ಹಾಗೆ ಹೇಳಿದರು.

ಪರದೇಶದಲ್ಲೂ ಇಂಥ ಚಿಂತನೆಯಿದೆ. ವಸ್ತುವಿನಲ್ಲಿ ಗುಣಗಳಿವೆ. ಗುಣಗಳಿಗೆ ಆಧಾರವಾಗಿ ಒಂದು ಮೂಲ ಸತ್ ಇದೆ. ಅದು ಸಬ್ಸ್ಟೆನ್ಸ್, ಗುಣ ಸಮುದಾಯದ ತೋರಿಕೆಯ ಅಪಿಯರೆನ್ಸ್. ಇರುವ ಅಸ್ತಿತ್ವ ಕಾಣದು, ಕಾಣುವ ತೋರಿಕೆ ಇರದು. ಏನು ಇದೆ ಅದು ಕಾಣಿಸುವುದಿಲ್ಲ, ಏನು ಇಲ್ಲ ಅದು ಕಾಣಿಸುತ್ತದೆ. ಹೂವಿನ ಸಬ್ಸ್ಟೆನ್ಸ್ ಇದೆ; ಕಾಣಿಸದು. ಗುಣ ಸಮುದಾಯ ಅಸತ್! ಸ್ವ ಅಸ್ತಿತ್ವ ರಹಿತ. ಆದರೆ ಅದು ಕಾಣಿಸುವುದು. ವಿಜ್ಞಾನಿಯೂ ಇಂಥದೇ ಮಾತನ್ನು ಹೇಳುತ್ತಾನೆ. ಟೇಬಲ್ ಎನ್ನುವುದು ಪ್ರಪಂಚ ಸಂಖ್ಯೆಯ ಅಣು ಸಮೂಹ ಅಷ್ಟೇ. ನಮಗೆ ತೋರುವ ಟೇಬಲ್ ಕೇವಲ ತೋರಿಕೆ ಅಷ್ಟೆ. ಅಂದರೆ ಟೇಬಲ್ ಇದೆ ಎಂದಲ್ಲ, ಇಲ್ಲವೆಂತಲೂ ಅಲ್ಲ. ಇನ್ನೊಂದು ಉದಾಹರಣೆ ನೋಡಿ. ನೀರಿನಲ್ಲಿ H ಮತ್ತು O ಮೂಲ ಘಟಕ. ಅವು ಅಣುಗಳು. ಅಣುಗಳು ಶಕ್ತಿಯ ಗುಳ್ಳೆಗಳು. ಅವು ಇವೆ. ಆದರೆ ಅವುಗಳ ಸಮೂಹದಲ್ಲಿ ತೋರಿದ 'ನೀರು' ಎನ್ನುವುದು ನಮ್ಮ ಅನುಭವಕ್ಕೆ ಬರುವ ಪ್ರಿಯವಸ್ತು. ಆದರೆ ಅದರಲ್ಲಿರುವುದೆಲ್ಲ ಬರೀ ಶಕ್ತಿ!! ನೀರು ಇದೆ ಎಂದರೆ ಇದೆ; ಇಲ್ಲವೆಂದರೆ ಇಲ್ಲ, ಎಲ್ಲವೂ ಹೀಗೆಯೇ. ಆದ್ದರಿಂದ ಶಂಕರರು ಜಗತ್ತನ್ನು 'ಮಾಯಿಕ' ಎಂದು ವರ್ಣಿಸಿದರು ದೃಷ್ಟಾಂತದ ಮೂಲಕ! ಬಸವಣ್ಣನವರು ಹೇಳುತ್ತಾರೆ.

*ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ*
*ಅಂಬುಜಕೆ ಭಾನುವಿನ ಉದಯದ ಚಿಂತೆ*
*ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ*
*ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೆ ಚಿಂತೆ*

ಚಕೋರ ಪಕ್ಷಿ ಹೇಗೆ ಚಂದ್ರಮನ ಚಿಂತಿಸುತ್ತದೆಯೋ ಅಂಬುಜ ಭಾನುವ ಚಿಂತಿಸುವುದೋ ಹಾಗೆ ಬಸವಣ್ಣನವರು ದೇವನ ನೆನೆಸುತ್ತಾರೆ. ದೃಷ್ಟಾಂತಗಳು ಹೇಳಬೇಕಾದ್ದನ್ನು ಸ್ಪಷ್ಟಪಡಿಸುತ್ತವೆ.

ಬಂಧನಕ್ಕೆ ಬಂದ ಗಿಳಿ ತನ್ನ ಬಂಧುಗಳ ನೆನಸುತ್ತದೆ. ಸುಂದರವಾದ ಪಂಜರ, ಅದರೊಳಗೆ ಗಿಳಿ. ಅದಕ್ಕೆ ಹಣ್ಣು ಹಂಪಲ, ನೀರು; ಎಲ್ಲ ಕೊಡುತ್ತೇವೆ. ಪ್ರೀತಿಸುತ್ತೇವೆ. ಆದರೆ ಅದನ್ನೆಲ್ಲಾ ಅನುಭವಿಸಿಯೂ ತನ್ನ ಹೃದಯದಲ್ಲಿ ಗಿಳಿ ಅರಣ್ಯವನ್ನು ನೆನಸುತ್ತದೆ. ಮಾವಿನ ಮರದಲ್ಲಿ ಕುಳಿತ ತನ್ನ ಬಂಧು ಬಾಂಧವರನ್ನು ನೆನಸುತ್ತದೆ. ಹಾಗೆ ಬಸವಣ್ಣನವರು ಎಲ್ಲದರ ಮಧ್ಯೆ, ಪ್ರೇಮಪಂಜರದ ಮಧ್ಯೆ ಕೂಡಲ ಸಂಗಮನನ್ನು ನೆನೆಸುತ್ತಾ ಇದ್ದರು. ಒಂದು ವೇಳೆ ದೃಷ್ಟಾಂತ ಬಳಸದಿದ್ದರೆ ಬಸವಣ್ಣನವರ ಭಾವತೀವ್ರತೆ ನಮಗೆ ಗೊತ್ತಾಗುತ್ತಿರಲಿಲ್ಲ. ಆದ್ದರಿಂದ ಅಧ್ಯಾತ್ಮ ಸಾಹಿತ್ಯದೊಳಗೆ ದೃಷ್ಟಾಂತ ಬಳಸುವ ಪದ್ಧತಿ ಬಹಳ ಬಳಕೆಗೆ ಬಂತು. ಬಹಳ ಪರಿಣಾಮಕಾರಿಯಾಗಿ ಬಳಸಿದರು. ಅದು ಅವರ ಅತ್ಯಂತ ಸೂಕ್ಷ್ಮವಾದ ಆಲೋಚನೆಗಳನ್ನು, ಭಾವನೆಗಳನ್ನು ಸ್ಪಷ್ಟವಾಗಿ ಚಿತ್ರಿಸಿತು.

ಭಗವಂತ ಅಂದರೇನು? ಜೀವ ಅಂದರೇನು? ಇದನ್ನು ಚಿತ್ರಿಸುವುದಕ್ಕಾಗಿ ಉಪನಿಷತ್ತು ಒಂದು ಸುಂದರ ದೃಷ್ಟಾಂತ ಬಳಸಿದೆ.

*ದ್ವಾ ಸುಪರ್ಣಾ ಸಯುಜಾ ಸಖಾಯಾ*
*ಸಮಾನಂ ವೃಕ್ಷಂ ಪರಿಷಸ್ವಜಾತೇ*
*ತಯೋರೇಕಃ ಪಿಪ್ಪಲಂ ಸ್ವಾದ್ವ-*
*ತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ*

(ಮುಂ. II, ೧, ೩-೪)

ನಾಲ್ಕು ಸಾಲುಗಳಲ್ಲಿ ಈ ಜಗತ್ತು, ಜೀವ, ಈಶ ಹಾಗೂ ಅವರ ಸ್ಥಿತಿ ಅದ್ಭುತವಾಗಿ ಚಿತ್ರಿತವಾಗಿದೆ. ಗ್ರಂಥ ಬರೆದು ತಿಳಿಸಿದರೂ ಸ್ಪಷ್ಟವಾಗದ ಕಲ್ಪನೆಗಳನ್ನು ಸುಲಭ ದೃಷ್ಟಾಂತಗಳ ಮೂಲಕ ರೇಖಿಸಿದ್ದಾರೆ !

ಒಂದು ಗಿಡ, ಹಣ್ಣಿನ ಗಿಡ. ಅದು ವಿಶಾಲವಾಗಿ ಹರವಿಕೊಂಡಿದೆ. ಶಾಖೆಶಾಖೆಗಳು. ಅಲ್ಲಿ ಸಾವಿರ ಸಾವಿರ ಹಣ್ಣುಗಳು. ಇಂತಹ ವೃಕ್ಷದಲ್ಲಿ ಒಂದು ಪಕ್ಷಿ ಕುಳಿತಿದೆ. ಆ ಪಕ್ಷಿ ಕುಳಿತ ಶಾಖೆಯ ಕೆಳಗಿನ ಶಾಖೆಯಲ್ಲಿ ಇನ್ನೊಂದು ಪಕ್ಷಿ ಕುಳಿತಿದೆ. ಈ ಪಕ್ಷಿ ಹಣ್ಣು ತಿನ್ನುತ್ತಿದೆ. ಮೇಲಿನ ಪಕ್ಷಿ ಏನನ್ನೂ ತಿನ್ನದೆ ಬರೀ ಪ್ರಕಾಶ ಚೆಲ್ಲುತ್ತಿದೆ. ಆ ಪಕ್ಷಿಯ ಪ್ರಕಾಶದೊಳಗೆ ಗಿಡ ಕಾಣಿಸುತ್ತದೆ. ಅಲ್ಲಿರುವ ಹಣ್ಣುಗಳು ಕಾಣುತ್ತವೆ. ಕೆಳಗಿರುವ ಪಕ್ಷಿ ಕಾಣುತ್ತದೆ. ಆ ಪಕ್ಷಿಯ ಬೆಳಕಿನೊಳಗೆ ಈ ಕೆಳಗಿನ ಪಕ್ಷಿ ಹಣ್ಣುಗಳನ್ನು ತಿನ್ನುವುದರಲ್ಲಿ ಮಗ್ನವಾಗಿದೆ. ಈ ಪಕ್ಷಿಗೆ, ಆ ಪಕ್ಷಿಗೆ ಅತ್ಯಂತ ಮೈತ್ರಿ, ಬಿಟ್ಟಿರದಷ್ಟು ಗಾಢ ಮೈತ್ರಿ. ಎರಡೂ ಕೂಡಿಯೇ ಇರುತ್ತವೆ. ಆದರೆ ಸ್ವಭಾವ ಭಿನ್ನ. ಮೇಲಿನದು ಪ್ರಕಾಶ ಮಾಡುತ್ತದೆ. ಕೆಳಗಿನದು ತಿನ್ನುವಲ್ಲಿ ಮಗ್ನ. ಒಂದೇ ವೃಕ್ಷದಲ್ಲಿ ಅವು ಆಶ್ರಯ ಪಡೆದಿವೆ. ಅಲ್ಲಿ ಇರುವ ಹಣ್ಣುಗಳು ಸುರುಚಿ. ಆ ಪಕ್ಷಿ ತನ್ನನ್ನೇ ಮರೆತು ಹಣ್ಣನ್ನು ತಿನ್ನುವಲ್ಲಿ ಮೈಮರೆತು ಇರಬೇಕಾದರೆ ಆ ಹಣ್ಣಿನ ರಸವೆಷ್ಟು ಸಿಹಿ ಇರಬೇಡ! ತಿನ್ನುವುದರಲ್ಲಿ ಪಕ್ಷಿ ಮೈ ಮರೆತುಬಿಟ್ಟಿದೆ !

ಮೇಲಿನ ಪಕ್ಷಿಗೆ ಹಣ್ಣನ್ನು ತಿನ್ನುತ್ತಿರುವ ಪಕ್ಷಿ ಕಾಣಿಸುತ್ತದೆ. ಆ ಹಣ್ಣಿನ ರಸವನ್ನು ಹೀರಿ ಸಂತೋಷಪಡುವ ಪಕ್ಷಿ ಕಾಣಿಸುತ್ತದೆ. ಆದರೆ ತಾನು ಮಾತ್ರ ಅದರಂತೆ ಆ ಹಣ್ಣಿಗೆ ಮೋಹಗೊಂಡಿಲ್ಲ. ಇದು ಆ ಪಕ್ಷಿಯ ವಿಶೇಷತೆ. ಸಾಮಾನ್ಯವಾಗಿ ಭೋಗ ದೃಶ್ಯ ಕಂಡು ಮನ ಬಯಸುತ್ತದೆ.

ಒಬ್ಬ ಮುದುಕ ದಾರಿಯಲ್ಲಿ ಹೊರಟ್ಟಿದ್ದಾನೆ. ಭಿತ್ತಿಯ ಶೃಂಗಾರ ರಸಚಿತ್ರ ನೋಡುತ್ತಾನೆ. ಆ ಚಿತ್ರ ನೋಡಿದ ಮರಕ್ಷಣವೇ ಮುದುಕನಿಗೆ ಹಿಂದಿನ ಕಥೆ ನೆನಪಾಗುತ್ತದೆ. ತಾನು, ತನ್ನ ಹೆಂಡತಿ, ಮೆರವಣಿಗೆ, ಎಲ್ಲಾ ನೋಡಿ ಕಣ್ಣು ತುಂಬಿ ಮೈಮರೆಯುತ್ತಾನೆ ಮುದುಕ. ಪ್ರತ್ಯಕ್ಷ ಇಲ್ಲ. ಒಂದು ದೃಶ್ಯ ನೋಡಿ ಮೈ ಮರೆತ. ದೃಶ್ಯದ ಪರಿಣಾಮ ಅಷ್ಟು ತೀವ್ರ ಮನಸ್ಸಿನ ಮೇಲೆ ! ನೋಡಿದ, ಬರೀ ನೋಟದಿಂದಲೇ, ಇಳಿ ವಯಸ್ಸಿನಲ್ಲಿ ಮನಸ್ಸು ಇಷ್ಟು ಮುಗ್ಧವಾಗುತ್ತದೆ ಅಂದ ಬಳಿಕ ಯುವಕನ ಮನಸ್ಸು ಎಷ್ಟು ಮೋಹಗೊಳ್ಳಬೇಡ? ಆದರೆ ಇಲ್ಲೊಂದೆರಡು ಪಕ್ಷಿಗಳು. ಒಂದು ಪಕ್ಷಿ ಆನಂದವಾಗಿ ತಿನ್ನುತ್ತದೆ. ಮಧುರ ಫಲ. ಒಳಗಿರುವ ತಿರುಳನ್ನು ತಿಂದು ಸಂತೋಷಪಡುತ್ತದೆ. ಇನ್ನೊಂದು ಪಕ್ಷಿ ಅದರ ಮೇಲೆ ಪ್ರಕಾಶ ಚೆಲ್ಲಿ ನೋಡುತ್ತಾ ಇದ್ದರೂ ಆ ಪಕ್ಷಿ ತಿನ್ನುತ್ತಿರುವ ಹಣ್ಣಿನ ಮೋಹ ಇಲ್ಲ ಅದಕ್ಕೆ, ಅರ್ಥಗರ್ಭಿತ ದೃಷ್ಟಾಂತ !

ಮೇಲಿರುವ ಪಕ್ಷಿ ಎಷ್ಟು ಪ್ರಕಾಶಗೊಳಿಸಿ ಎಚ್ಚರಿಸಿದರೂ ಆ ಕಡೆ ಲಕ್ಷ್ಯ ಕೊಡದಷ್ಟು ಮೈಮರೆತು ಬಿಟ್ಟಿದೆ. ಹಣ್ಣು ತಿನ್ನುವುದರಲ್ಲಿ ಆ ಕೆಳಪಕ್ಷಿ. ಹಾಗೆ ನಮ್ಮ ಸ್ಥಿತಿ. ೬೦ ವರ್ಷವಾದರೂ ಎಚ್ಚರ ಆಗಲಾರದಷ್ಟು ಮಗ್ನತೆ ಸಂಸಾರದಲ್ಲಿ. ಜೀವ ಪಕ್ಷಿ ಹಣ್ಣು ತಿನ್ನುವುದರಲ್ಲಿ ಮಗ್ನ ! ಈ ಸಂಗತಿಯನ್ನು





ಚಿಂತಿಸಬೇಕು. ಚಿಂತನೆ ಮಾಡಿದರೆ ನಮ್ಮ ಜೀವನ ಹೇಗಿದೆ, ದಿವ್ಯ ಜೀವನ ಹೇಗಿರುತ್ತದೆ – ಎನ್ನುವುದರ ಕಲ್ಪನೆ ಬರುತ್ತದೆ. ನಾವು ಮೋಹಾವೃತರು, ಉಪಭೋಗಶೀಲರು, ಮೋಹದ ದಾಸರು ! ಹೀಗಾಗಿ ಅನ್ಯಚಿಂತನೆಗೆ ಅವಕಾಶವಿಲ್ಲ.

ಭೋಗಮೋಹಿಯಾದ ಈ ಪಕ್ಷಿ ವೀತಶೋಕವಾಗ ಬೇಕಾದರೆ ಏನು ಮಾಡಬೇಕು? ಮುಂದಿನ ಎರಡು ಸಾಲುಗಳಲ್ಲಿ ಹೇಳಿದ್ದಾರೆ. *ಇಂತಹ ಪಕ್ಷಿ ಎಚ್ಚರವಾಗಬೇಕು. ಮೋಹದಿಂದ ಪಾರಾಗಬೇಕು. ಮೋಹದ ಶೋಕದಿಂದ ಮುಕ್ತವಾಗಬೇಕು ! ವೀತಶೋಕಿಯಾಗಬೇಕು !* ಹಾಗಾಗ ಬೇಕಾದರೆ ಅದು ತನ್ನ ಮೇಲಿನ ಪಕ್ಷಿಯನ್ನು ನೋಡಬೇಕು. ಅದು ಈಶ. ತನ್ನಂತೆ ಅನೀಶವಲ್ಲ – ಎಂಬುದನ್ನು ಗಮಿಸಬೇಕು. ಹಣ್ಣಿನ ಆಕಾರ, ರುಚಿ, ತನ್ನನ್ನು ಹುಚ್ಚು ಮಾಡಿದೆ; ಆದರೆ ಮೇಲಿನ ಪಕ್ಷಿ ಹಣ್ಣಿನ ಪ್ರಭಾವಕ್ಕೆ ಒಳಗಾಗಿಲ್ಲ. ಹಣ್ಣಿನ ಪ್ರಭಾವದಿಂದ ಹೊರಗೆ ಇರುವುದೇ ಈಶ. ಹಣ್ಣಿನ ಪ್ರಭಾವಕ್ಕೆ ಸಿಕ್ಕಿಬಿದ್ದಿರುವುದೇ ಅನೀಶ. ಅದು ಶೋಕ ರಹಿತ. ತಾನು ಶೋಕ ಶೀಲ. ಇದನ್ನು ಚಿಂತಿಸಬೇಕು.

ಕೆಳಗಿನ ಪಕ್ಷಿ ಮೇಲಿನ ಪಕ್ಷಿಯನ್ನು ನೋಡಿ ಅದರ ಮಹಿಮೆಯನ್ನು ಗುರ್ತಿಸಬೇಕು. ಮಹಿಮೆ ಅಂದರೆ ಸದಾ ಪ್ರಕಾಶ ಮಾಡುತ್ತಿರುವುದು. ಎಲ್ಲಾ ಉಪಭೋಗ ವಸ್ತುಗಳು ಇದ್ದಾಗ ಆ ವಸ್ತುಗಳತ್ತ ಲಕ್ಷ್ಯ ಕೊಡದೆ ಇರುವುದು ಮಹಿಮೆ. ಈ ಕೋಣೆಯೊಳಗೆ ಯಾರಿಲ್ಲ ಎಂದು ತಿಳಿದುಕೊಳ್ಳಿ, ಹತ್ತು ಪೈಸೆ ಬಿದ್ದಿದೆ. ಅದನ್ನು ಎತ್ತಿಕೊಳ್ಳಬೇಕು ಎನ್ನಿಸುತ್ತದೆ. ಇದು ಮೋಹ ಮಹಿಮೆ. ಇದು ಇಲ್ಲದವರು ನಿಜವಾದ ಮಹಿಮಾನ್ವಿತರು. ಸಮಸ್ತ ರಾಜ್ಯ ಕೊಟ್ಟರೂ ಅತ್ತ ಲಕ್ಷ್ಯ ವಹಿಸದ ಸ್ಥಿತಿಯು 'ಮಹಿಮೆ'. ಅದು ವಿರಾಗ ಮಹಿಮೆ!

ಹಾಗೆ ಮೇಲಿನ ಪಕ್ಷಿಯ ಮಹಿಮೆ! ಅಂದರೆ ಕೇವಲ ನೋಡುತ್ತದೆ, ಆಸೆ ಪಡುವುದಿಲ್ಲ. ಇಂತಹ ಅದರ ಮಹಿಮೆಯನ್ನು ಕೆಳಗಿನ ಪಕ್ಷಿ ಗುರುತಿಸಿದರೆ ಅದು ವೀತಶೋಕ ವಾಗುತ್ತದೆ! ಅದರ ಮೋಹ ಮರೆಯಾಗುತ್ತದೆ. ಇದು ಸ್ವಾತಂತ್ರ್ಯ! ಮೋಹ ಮುಕ್ತಿ! ಆ ಮೇಲಿನ ಪಕ್ಷಿ ಹಾರಿ ಹೋಗುತ್ತದೆ. ಕೆಳಗಿನ ಪಕ್ಷಿ ಹಾರಿ ಹೋಗುತ್ತದೆ. ಎರಡೂ ಬಯಲಾಗುತ್ತವೆ. ಏನು ಉಳಿಯುತ್ತದೆ ಅದು ಅನಂತವಾದ ಆಕಾಶ !

ದೃಷ್ಟಾಂತವಿದು. ಇಲ್ಲಿ ಗಿಡ ಯಾವುದು? ಎರಡು ಪಕ್ಷಿ ಯಾವುವು? ಹಣ್ಣು ಏನು? ಆ ಬೆಳಕು ಯಾವುದು? ಬಂಧನ ಏನು? ಯಾವಾಗ ಮುಕ್ತಿ? ಎಲ್ಲಾ ಆ ದೃಷ್ಟಾಂತದ ಹಿನ್ನೆಲೆಯೊಳಗೆ ಚಿತ್ರಿಸಿಕೊಳ್ಳುವುದು ಚಿಂತನ.

ದೃಷ್ಟಾಂತ ನೋಡಿ. ಒಂದು ಗಿಡ ಹಬ್ಬಿಕೊಂಡಿದೆ. ವಿಶಾಲವಾದ ವೃಕ್ಷ. ಅಲ್ಲಿ ಪಕ್ಷಿ ಕುಳಿತಿದೆ. ಅದು ಜೀವ. ಆ ವೃಕ್ಷವೇ ದೇಹ, ಜಗತ್ತು. ಜಗತ್ತಿನಲ್ಲಿ ಜೀವ ಪಕ್ಷಿ ಕುಳಿತಿದೆ. ದೇಹದಲ್ಲಿ ಜೀವಪಕ್ಷಿ ಕುಳಿತಿದೆ. ಈ ಸಮಸ್ತ ವಿಶ್ವವೆಂಬ ಭವ್ಯವೃಕ್ಷದ ಮೇಲೆ ಪಕ್ಷಿ ಕುಳಿತಿದೆ. ವಿಶಾಲವಾದ ಮಹಾವಿಶ್ವದೊಳಗೆ ಸಣ್ಣ ಟೊಂಗೆ, ಅದು ದೇಹ. ಆ ದೇಹದ ಮೇಲೆ ಒಂದು ಪಕ್ಷಿ ಕುಳಿತಿದೆ.

ಭೂಮಿ, ನೀರು, ಅಗ್ನಿ, ವಾಯು, ಆಕಾಶ ಇದು ವಿಶಾಲವಾದ ವೃಕ್ಷ! ವೃಕ್ಷ ಹತ್ತು ದಿಕ್ಕಿನಲ್ಲಿ ಹರವಿದೆ. ಈ ವೃಕ್ಷದೊಳಗೆ ಶಾಖೆಗಳು, ಅಸಂಖ್ಯ ಶಾಖೆಗಳು ! ಅಸಂಖ್ಯ ದೇಹಗಳು ! ಆ ಪ್ರತಿ ಶಾಖೆಯೊಳಗೆ ಹಣ್ಣುಗಳು. ಶಬ್ದ, ಸ್ಪರ್ಶ, ರೂಪ, ರಸ, ಗಂಧಮಯ ಹಣ್ಣು. ಈ ಹಣ್ಣುಗಳು ಮೆತ್ತಿ ಬಿಟ್ಟಿವೆ. ಕಣ್ಣು ತೆರೆದರೆ ಸಾಕು ರೂಪು ಕಾಣಿಸುತ್ತದೆ. ಕಿವಿ ಕೊಟ್ಟರೆ ಧ್ವನಿ ಕೇಳಿಸುತ್ತದೆ. ಮುಟ್ಟಿದರೆ ಮಧುರ ಸ್ಪರ್ಶ. ಎಷ್ಟು ಬಗೆಯ ರಸಗಳು ! ಎಷ್ಟು ಬಗೆಯ ವಾಸನೆ ! ಇದರಿಂದ ಜಗತ್ತು ರಸಪೂರ್ಣ. ಒಂದು ವೇಳೆ ಶಬ್ದ, ರೂಪ, ರಸ ತೆಗೆದು ಹಾಕಿದರೆ ಈ ವೃಕ್ಷ ಅಪ್ರಿಯ ! ಅರಸ, ನೀರಸ ! ಈ ಪಂಚ ಹಣ್ಣುಗಳು ರಸಪೂರ್ಣ, ಆಕರ್ಷಕ.

ರಾವಣ ಸಾಮಾನ್ಯ ಮನುಷ್ಯ ಅಲ್ಲ. ವಿದ್ಯಾವಂತ, ಜ್ಞಾನಿ. ಭಗವಂತನನ್ನೆ ಒಲಿಸಬಲ್ಲ ತಪಸ್ವಿ. ಇಂತಹ ಈತನನ್ನು ಮರಳುಗೊಳಿಸಿತು ರೂಪ ! ಹುಚ್ಚು ಹಿಡಿಸಿತು. ಸಾಮಾನ್ಯ ಮನಸ್ಸಿನವರಾದ ನಮ್ಮನ್ನು ಅದೆಷ್ಟು ಹುಚ್ಚು ಹಿಡಿಸಬಾರದು?

ಜಗತ್ತು ಅನ್ನುವ ವೃಕ್ಷದೊಳಗೆ ಇಂತಹ ಐದು ಹಣ್ಣುಗಳು. ಈ ಹಣ್ಣಿನ ಟೊಂಗೆಯ ಮೇಲೆ ಜೀವ ಎನ್ನುವ ಪಕ್ಷಿ ಕುಳಿತಿದೆ. ಕುಳಿತು ತಿನ್ನುತ್ತಿದೆ ಹಣ್ಣನ್ನು. ಕುಳಿತ ದಿನದಿಂದಲೇ ಹಣ್ಣು ತಿನ್ನಲು ಆರಂಭಿಸಿದೆ. ಎಂದು ಈ ಮನುಷ್ಯ ಜಗತ್ತಿಗೆ ಬಂದ, ಅಂದೇ ತಿನ್ನಲು ತೊಡಗಿದ. ತಿನ್ನುವಲ್ಲಿ ಮಗ್ನನಾಗಿದ್ದಾನೆ. ಎಷ್ಟು ಮಗ್ನನಾಗಿದ್ದಾನೆಂದರೆ ಮೇಲಿರುವ ಪಕ್ಷಿ ಕಾಣಿಸುತ್ತಿಲ್ಲ! ತಾನು ಯಾರು ಗೊತ್ತಾಗುತ್ತಿಲ್ಲ. 'ಪುರುಷಃ ನಿಮಗ್ನಃ' ಅವನನ್ನು ಎಚ್ಚರಿಸುವುದೇ ಕಷ್ಟ; ಅಷ್ಟು ಈ ಸಂಸಾರದೊಳಗೆ ಮುಳುಗಿ ಹೋಗಿದ್ದಾನೆ !

ಬುದ್ಧ, ಮಹಾವೀರ, ಶಂಕರಾಚಾರ್ಯ, ಬಸವಣ್ಣ, ಅಲ್ಲಮ ಪ್ರಭು, ಸಂತರು, ಮಹಾನುಭಾವರು ಬಂದರು. ಎಚ್ಚರಿಸಬೇಕೆಂದು ಪ್ರಯತ್ನಿಸಿದರು. *''ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿ ಬೋಧತ''* ಎಂದರು. ಏಳಿ, ಒಂದಿಷ್ಟು ಕಣ್ಣು ಬಿಟ್ಟು ನೋಡಿ, ಶ್ರೇಷ್ಠರ ಬಲ್ಲವರ ಸಮೀಪ ಹೋಗಿ, ಜೀವನ ಉದ್ಧಾರ ಮಾಡಿಕೊಳ್ಳಿ ಎಂದರು. ಇಷ್ಟು ಜನ ಬಂದು ಹೋದರೂ ನಾವು ಹಾಗೇ ಮಲಗಿದ್ದೇವೆ. ಅವರ ಮಾತುಗಳನ್ನು ಕಂಠಪಾಠ ಮಾಡಿದ್ದೇವೆ. ಅಸ್ಖಲಿತವಾಗಿ ನುಡಿಯುತ್ತೇವೆ. ಆದರೆ ಆಚ್ಚರಿಯೆಂದರೆ ನಾವು ಎದ್ದೇ ಇಲ್ಲ. ನಮ್ಮ ನುಡಿಯೆಲ್ಲ ನಿದ್ರೆಯಲ್ಲಿ, ಹಾಸಿಗೆಯಲ್ಲಿ!

ಒಬ್ಬ ಗುರು. ಗುರುವಿನ ಹತ್ತಿರ ಶಿಷ್ಯ. ಇಬ್ಬರೂ ಕೂಡಿ ಹೊರಟ್ಟಿದ್ದರು. ಗುರುವಿಗೆ ನೀರಡಿಕೆ, ಶಿಷ್ಯ ನೀರು ತರಲು ಹೋದ. ಶಿಷ್ಯ ಗುರುವನ್ನು ಒಂದು ಮರದ ಕೆಳಗೆ ನೆರಳಲ್ಲಿ ಕೂರಿಸಿ ತಂಬಿಗೆ ತೆಗೆದುಕೊಂಡು ನೀರು ತರಲು ಹೋದ. ಹೋದ, ಬಹಳ ದೂರ ಹೋದ. ಬಾವಿಯ ಹತ್ತಿರ ಒಬ್ಬ ಹೆಣ್ಣು ಮಗಳು. ಸಣ್ಣವಳು. ಆಕೆ ನೀರನ್ನು ಜಗ್ಗುತ್ತಿದ್ದಳು. ಒಳ್ಳೆಯ ನೀರು. ನೀರು ಕುಡಿವ ಬಯಕೆ. ಆಕೆ ಸುರಿದಳು ಬೊಗಸೆಗೆ. ಆ ನೀರಿನಲ್ಲಿ ಆಕೆಯ ಮುಖ ! ತಾನು ಗುರುವಿನ ಶಿಷ್ಯ ಎನ್ನುವುದನ್ನು ಮರೆತ. ಗುರುವನ್ನೂ ಮರೆತ. ಆಕೆಯ ಹಿಂದೆ ಹೋದ. ಅವಳ ಮನೆಗೆ ಹೋದ. ಆಕೆಯ ತಂದೆಯನ್ನು ಸಂಧಿಸಿ ಹೇಳಿದ, ತನ್ನ ಮನದ ಇಚ್ಛೆಯನ್ನು ! ಶಿಷ್ಯ ಬರುತ್ತಾನೆ, ನೀರು ತರುತ್ತಾನೆ ಎಂದು ಕುಳಿತಿದ್ದಾನೆ ಗುರು. ಶಿಷ್ಯನದು ಸುಂದರ ದೇಹ. ಅವನ ಕಂಡು ಅವನಾಸೆ ತಿಳಿದು ತಂದೆಗೆ ಆನಂದ. ಭಗವಂತನೇ ಕಳುಹಿಸಿಕೊಟ್ಟನು. ಇದು ನಿನ್ನದೇ ಮನೆ. ಇವಳು ನಿನ್ನವಳೇ ಎಂದು ಲಗ್ನ ಮಾಡಿ ಮುಗಿಸಿ ಬಿಟ್ಟ. ಮಕ್ಕಳಾದವು ಒಂದೆರಡಲ್ಲ! ಇನ್ನೂ ನೆನಪಿಲ್ಲ ಗುರುವಿನತ್ತ ಹೋಗಲು. ಇವನನ್ನು ಎಚ್ಚರಿಸಲು ಸಂತರು ಬಂದು ಹೋದರು. ನೆನಪಾಗದು, ಸಂಸಾರ ಹರಿಯದು. ಗುರು ದಾರಿ ಕಾಯುತ್ತ ಕುಳಿತಿದ್ದಾನೆ. ಬರುತ್ತಾನೆ ಶಿಷ್ಯ ಎಂದು!

ಅಂತಹ ವಿರಕ್ತ ಶಿಷ್ಯನೇ ಸಿಕ್ಕಿಕೊಂಡ ! ಇನ್ನು ಆ ವಿಷಯವನ್ನೇ ಹುಡುಕಾಡ ಹೋದವರು? ಆ ಶಿಷ್ಯನ ಹೆಂಡತಿ ಸತ್ತಳು ! ಅಷ್ಟು ಸುಂದರ ಹೆಂಡತಿ ಸತ್ತ ಕೂಡಲೇ ವಿರಕ್ತಿ ಬಂತು ! ನೆನಪಾಯ್ತು; ಗುರುವನ್ನು ಕೂರಿಸಿ ಬಂದುದು ನೆನಪಾಯ್ತು. ಓಡಿ ಬಂದ; ಗುರು ನಿರೀಕ್ಷೆಯಿಂದ ಅಲ್ಲೇ ಕುಳಿತಿದ್ದ ! ಶಿಷ್ಯ ಎಂದಾದರೂ ಬರಲಿ, ಬಂದೇ ಬರುತ್ತಾನೆ ಎಂದು ದಾರಿ ಕಾಯುತ್ತಿದ್ದ ಗುರು. ಅಷ್ಟು ಪ್ರೇಮ ಗುರುವಿನದು !

ಪ್ರಪಂಚದ ಈ ವಿಷಯಗಳನ್ನು ತಿನ್ನುವಾಗ, ಸಂಸಾರ ಮಾಡುವಾಗ, ಮನಸ್ಸು ಇಷ್ಟು ಮರುಳಾಗಿ ಹೋಗುತ್ತದೆ, ಮುಗ್ಧವಾಗಿ ಹೋಗುತ್ತದೆ. ಎಲ್ಲಿ ಭಗವಂತ? ಎಲ್ಲಿ ಸಂತರು? ನಾವು ಕೆಟ್ಟವರಲ್ಲ, ನಾವು ಒಳ್ಳೆಯವರೇ. ಶಿಷ್ಯ ಒಳ್ಳೆಯವನೇ. ಜಗತ್ತಿನ ಮಾಯಾ ಪ್ರಭಾವವೇ ಅಷ್ಟು ಇರುವಾಗ ''ಜಗವ ಸುತ್ತಿರ್ಪುದು ನಿನ್ನಯ ಮಾಯೆ''. ಏನು ಮಾಡಲಾದೀತು?

ವಿಷಯ ಫಲ ತಿನ್ನುವಾಗ ಶೋಕವುಂಟಾಗುತ್ತದೆ. ಪ್ರಪಂಚ ಮಾಡುವಾಗ ಒಂದಿಷ್ಟು ಕಷ್ಟಬರುತ್ತದೆ. ಶೋಕಗೊಳ್ಳುತ್ತಾನೆ ಮನುಷ್ಯ. ಆ ಶೋಕ ನೀಗಿಸಲು ಇದು ಭಗವತ್ ಚಿಂತನ ! ವ್ಯಾಕರಣದ ಚಿಂತನೆಯಲ್ಲ. ಇದು ತರ್ಕದ ಚಿಂತನೆಯಲ್ಲ, ಭಾಷಾ ಚಿಂತನೆಯಲ್ಲ. ನಮ್ಮ ಬದುಕಿನತ್ತ ನೋಡಿಕೊಳ್ಳುವ ಕ್ಷಣ ಇದು. ಬದುಕನ್ನು ಸಮೃದ್ಧಗೊಳಿಸುವ ಪದ್ಧತಿ !

ಮೇಲೆ ಕುಳಿತ ಪಕ್ಷಿ ಸಾಕ್ಷೀಪಕ್ಷಿಯು. ಈ ಜೀವಾತ್ಮನ ದೃಷ್ಟಿಯಿಂದ ಭಾವಕ್ಕೆ ಬಂದ ಭಗವಂತ ! ನಾನು ಜೀವ ಪಕ್ಷಿ. ಭಗವಂತನ ದೃಷ್ಟಿಯದು ಸಾಕ್ಷಿ ಪಕ್ಷಿ. ಅಂತಹ ಜ್ಞಾನ ಪಕ್ಷಿ ಜಗತ್ತಿನ ಮೇಲೆ ಜ್ಞಾನದ ಬೆಳಕು ಚೆಲ್ಲಿದೆ. ಹಣ್ಣು ಹಂಪಲುಗಳನ್ನು; ಶಬ್ದ, ಸ್ಪರ್ಶ, ರೂಪ, ರಸಾದಿಗಳನ್ನು ಬೆಳಗಿಸುತ್ತದೆ. ಅಂತಹ ಪ್ರಕಾಶ ಚೆಲ್ಲುವ ಭಗವಂತನ ಮೇಲೆ ಶಬ್ದ, ಸ್ಪರ್ಶ, ರೂಪಗಳ ಪ್ರಭಾವ ಇಲ್ಲ. ನಾವು ಆತನನ್ನು ಬಂಗಾರದಲ್ಲಿ ಮುಚ್ಚಿದರೂ ಎಷ್ಟು ವಸ್ತುಗಳನ್ನು ಸಮರ್ಪಿಸಿದರೂ ಭಗವಂತ ಆ ಕಡೆ ನೋಡುವುದಿಲ್ಲ. ನೀವು ಬೇಕಾದರೆ ಸಾದಾ ಅನ್ನ ಅರ್ಪಿಸಿ, ಅಥವಾ ಮೃಷ್ಟಾನ್ನ ಅರ್ಪಣ ಮಾಡಿ, ಯಾವುದನ್ನೂ ಲಿಂಗ ನೋಡುವುದಿಲ್ಲ. ಯಾವಾಗ ಈ ಜೀವ ಮೇಲ್ಮುಖ ಮಾಡಿ ಆ ಸಾಕ್ಷಿಯತ್ತ ಲಕ್ಷ್ಯ ಕೊಡುತ್ತಾನೆಯೋ ಆಗ ಎಲ್ಲೆಡೆ ಹರವಿದ ಪ್ರಕಾಶ ಕಾಣುತ್ತದೆ. ಆ ಪ್ರಕಾಶದ ದರ್ಶನದಿಂದ ಜೀವಪಕ್ಷಿಯ ಮೋಹ ಮರೆಯಾಗುತ್ತದೆ. ಶೋಕ ತಪ್ಪಿ ಹೋಗುತ್ತದೆ. ಜೀವಭಾವವು ಹಾರಿ ಹೋಗುತ್ತದೆ. ಆ ಜೀವ ಕಲ್ಪನೆಯೊಂದಿಗೆ ಈಶ ಕಲ್ಪನೆಯೂ ಮರೆಯಾಗುತ್ತದೆ. ಆಗ ಏನು ಉಳಿಯುವುದೋ ಅದು ಶುದ್ಧ ಭಗವಂತ !

(ಕೃಪೆ : ಭಗವಚ್ಚಿಂತನ)







# ಸಮಾಜ ಮತ್ತು ರಾಜಕೀಯ : ಭಾರತೀಯ ಸಂದರ್ಭದ ಸಮಾಜಶಾಸ್ತ್ರೀಯ ವಿಶ್ಲೇಷಣೆ

**- ಡಾ. ವಿಘ್ನೇಶ್ ಎನ್. ಭಟ್**
**ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು,**
**ಸಮಾಜಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾಲಯ,**
**ಜ್ಞಾನಸಹ್ಯಾದ್ರಿ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ.**

ಭಾರತೀಯ ಸಮಾಜವು ಇಂದು ಸಾಮಾಜಿಕ-ಸಾಂಸ್ಕೃತಿಕ ಸಂಕ್ರಮಣ ಕಾಲದಲ್ಲಿದೆಯೆಂದು ನನ್ನ ಬಲವಾದ ಅನಿಸಿಕೆ, ನಂಬಿಕೆ. ಸ್ಪರ್ಧಾತ್ಮಕತೆ, ಧರ್ಮನಿರಪೇಕ್ಷತೆಗೆ, ಸ್ವಾತಂತ್ರ್ಯ ಮೊದಲಾದವುಗಳನ್ನು ತಾತ್ವಿಕವಾಗಿ ಮತ್ತು ಅನ್ವಯಿಕವಾಗಿ ಒಪ್ಪಿಕೊಂಡ ಸ್ವತಂತ್ರ ಭಾರತದ ರಾಜಕೀಯ ವ್ಯವಸ್ಥೆಯು ಆ ಮೂಲಕ ಒಂದು ಹೊಸ ಬಗೆಯ ಸಾಮಾಜಿಕ ರಚನೆ ಹಾಗೂ ವ್ಯವಸ್ಥೆಗಳನ್ನು ಹುಟ್ಟುಹಾಕಲು ಕಂಕಣಬದ್ಧವೆಂದು ಘೋಷಿಸಿದೆ. ಆದರೆ ಇದೇ ಸಮಾಜದ ಇನ್ನೊಂದು ಸ್ತರದಲ್ಲಿ ಸಾಂಪ್ರದಾಯಿಕ ರೂಢಿ, ಮೌಲ್ಯ, ಆಚಾರಗಳು ಸಾಮಾಜಿಕ ಸ್ತರವಿನ್ಯಾಸದ ನೆರಳಲ್ಲಿ ಬೇರುಬಿಟ್ಟಿದ್ದು, ಆಧುನಿಕ ಮೌಲ್ಯಗಳಿಗೆ ಆಹ್ವಾನವಿತ್ತಿವೆ. ಇತ್ತೀಚಿನ ವರ್ಷಗಳಲ್ಲಿ ಹೊಸ ಅವಕಾಶಗಳಿಂದಾಗಿ ಸಾಮಾಜಿಕ ಚಲನೆಯ ಗತಿಯಲ್ಲಿ ತುಸು ವೇಗ ಕಂಡುಬಂದರೂ, ಅದು ಸಾಂಪ್ರದಾಯಿಕ ಭಾರತೀಯ ಸಮಾಜದಲ್ಲಿ ಬಲವಾಗಿ ಬೇರೂರಿರುವ ನಂಬಿಕೆಗಳ ಶಕ್ತಿಯನ್ನು ಕಡಿಮೆ ಮಾಡುವಲ್ಲಿ ಸವಾಲಾಗಿ ಪರಿಣಮಿಸಿಲ್ಲ. ಇದರಿಂದಾಗಿ ಹೊಸ ಮತ್ತು ಹಳೆಯ ಮೌಲ್ಯಗಳ ವ್ಯವಸ್ಥೆಗಳು ಒಂದೇ ಸಮಯದಲ್ಲಿ ಪರಸ್ಪರ ಎದುರಾಗಿದ್ದು ಇದರಿಂದಾಗಿ ಕೆಲವು ಸಮಸ್ಯೆಗಳೂ ಹೊರಹೊಮ್ಮಿವೆ. ಪ್ರಮುಖವಾಗಿ ಇಂಥ ಸಮಸ್ಯೆಗಳು 'ರಾಜಕೀಯ' ಮತ್ತು 'ಸಾಮಾಜಿಕ-ಸಾಂಸ್ಕೃತಿಕ' ಉಪವ್ಯವಸ್ಥೆಗಳ ನಡುವೆ ನಡೆಯುವ ಅಂತರ್‌ಕ್ರಿಯೆಗಳ ಮೇಲೆ ಗಾಢವಾದ ಪರಿಣಾಮ ಬೀರಿವೆ. ಆದ್ದರಿಂದಲೇ ಮಾನವಸಂಸ್ಕೃತಿಯ ಇತಿಹಾಸದಲ್ಲಿ ಈ ಹಿಂದೆ ನಡೆದ 'ಧರ್ಮ-ರಾಜಕೀಯ' ವಿವಾದಕ್ಕೆ (Church-State Controversy) ಇಂದು ಹೊಸ ಆಯಾಮಗಳು ಮೂಡಿ ಈ ನಿಟ್ಟಿನಲ್ಲಿ ವಿಮರ್ಶಾತ್ಮಕವಾಗಿ ನೋಡುವುದು ಅಗತ್ಯವೆನಿಸಿದೆ. ನಿರಂತರವೆನಿಸಿದ ಪರಿವರ್ತನಾ ಪ್ರಕ್ರಿಯೆಯ ವಿವಿಧ ಓರೆ-ಕೋರೆಗಳಿಂದಾಗಿ ಸಾಮಾಜಿಕ ವ್ಯವಸ್ಥೆಗೆ ಒಳಪಟ್ಟ 'ರಾಜಕೀಯ' ಹಾಗೂ 'ಸಂಸ್ಕೃತಿ' ವ್ಯವಸ್ಥೆಗಳ ನಡುವಿನ ಅಂತರ್‌ಕ್ರಿಯೆಗಳು ಒಮ್ಮತ್ರ ರೂಪದಲ್ಲಿ ಪ್ರಕಟವಾಗದೆ, ತಮ್ಮ ನಡುವೆ ಅಂತರವನ್ನು ಸೃಷ್ಟಿಸಿಕೊಳ್ಳುತ್ತವೆ. ಇದರಿಂದಾಗಿ ಸಮುದಾಯದ ಜೀವನಕ್ರಮದಲ್ಲಿ ಗೊಂದಲ ಸೃಷ್ಟಿಯಾಗಿ ಸಾಮಾಜಿಕ ಅಭಿವೃದ್ಧಿಯಲ್ಲಿ ಬಾಧೆಗಳಾಗುವ ಸಂಭವವುಂಟು. ಭಾರತದ ಇಂದಿನ ಪರಿಸ್ಥಿತಿಗೆ ಈ ಮಾತು ವಿವಿಧ ವಿಧಗಳಲ್ಲಿ ಅನ್ವಯಿಸುತ್ತದೆ. ಮಹಾತ್ಮ ಗಾಂಧೀಜಿಯವರು ಹೇಳಿದಂತೆ ನಮ್ಮ ದೇಶದಲ್ಲಿ ಇಂದು ಕಾಣುವ ತತ್ತ್ವರಹಿತ ರಾಜಕೀಯವು ಸಾಮಾಜಿಕ ಅಭಿವೃದ್ಧಿಯ ದಾರಿಯಲ್ಲಿ ಮುಳ್ಳಾಗಿ ಪರಿಣಮಿಸಿದೆ.

ಗ್ರಾಮರಾಜ್ಯವು ರಾಮರಾಜ್ಯವೆಂದು ತಾತ್ವಿಕವಾಗಿ ನಾವು ನಂಬಿದ್ದರೂ, ಹಳ್ಳಿಗಳ ನಾಡಾದ ಭಾರತದಲ್ಲಿ ಇಂದು ಪರಿಸ್ಥಿತಿ ಬದಲಾಗುತ್ತಾ ನಡೆದಿದೆ. ಹಳ್ಳಿಗರ ಪ್ರಾಮಾಣಿಕ, ಮುಗ್ಧ ಹಾಗೂ ಶ್ರಮಿಕ ಜೀವನಕ್ರಮದಲ್ಲಿ ಅನೇಕ ಏರು-ಪೇರುಗಳಾಗಿವೆ. ರಾಜಕೀಯ ಪ್ರಭಾವ, ಪಟ್ಟಣದವರಿಂದ ಶೋಷಣೆ, ಉದ್ಯಮಿಗಳ ಆಮಿಷ, ನಗರಜೀವನದ ಅಂಧಾನುಕರಣೆ, ಸಮೂಹ ಮಾಧ್ಯಮಗಳ ಪರಿಣಾಮ, ಸರ್ಕಾರದ ಯೋಚನೆ-ಯೋಜನೆಗಳಲ್ಲಿನ ದೋಷ; ಅಧಿಕಾರಿ ವರ್ಗದವರ ಲಂಚಗುಳಿತನಗಳೆಲ್ಲವೂ ಇಂದಿನ ಭಾರತೀಯ ಸಮಾಜದಲ್ಲಿ ಮೇಳೈಸಿ ಸಾಮಾಜಿಕ ಜೀವನದ ವಿಧಾನವೇ ಬದಲಾಯಿಸಿದೆ. 'ತೃಣಮೂಲ' (Gross Roots) ರಾಜಕೀಯದ ಹೆಸರಿನಲ್ಲಿ, ಸ್ವಯಂ ಆಡಳಿತ ಸಂಸ್ಥೆಗಳ ಕಾರಣದಿಂದಾಗಿ ಮನೆಮನೆಗೂ ಪಕ್ಷಗಳ ರಾಜಕೀಯದ ಬಿಸಿ ಮುಟ್ಟಿದೆ. ಇಂಥ ಸಾಮಾಜಿಕ ವಾತಾವರಣದ ಸೈದ್ಧಾಂತಿಕ ಚರ್ಚೆ ನಡೆಯುವುದು ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಯ ದೃಷ್ಟಿಯಿಂದ ಬಹು ಅಗತ್ಯವೆನಿಸಿದೆ.

## ಸೈದ್ಧಾಂತಿಕ ಪರಿಕಲ್ಪನೆಗಳು : 'ಸಮಾಜ' ಮತ್ತು 'ರಾಜಕೀಯ'

ಸಮಾಜ ಎಂಬ ಪರಿಕಲ್ಪನೆಯು ಆಧುನಿಕ ಮಾನವ ಜೀವನದಲ್ಲಿ ಎಷ್ಟರಮಟ್ಟಿಗೆ ಹಾಸುಹೊಕ್ಕಿದೆಯೆಂದರೆ ಸಮಾಜವನ್ನು ವ್ಯಕ್ತಿಯ ಜೀವನದಿಂದ ಪ್ರತ್ಯೇಕವಾಗಿಸಿ ನೋಡುವುದು ಊಹೆಗೂ ನಿಲುಕದ ವಿಷಯ. ಮಾನವನು ಸಮಾಜಜೀವಿ ಎಂಬುದನ್ನು ವಿವರಿಸುವುದು ಇಂದು ಅನಗತ್ಯವಷ್ಟೇ ಅಲ್ಲ, ಹಾಸ್ಯಾಸ್ಪದವೂ





ಆದೀತು. ಮನುಕುಲದ ಇತಿಹಾಸವನ್ನು ಸಮಾಜ ವಿಜ್ಞಾನಗಳು ಸಮಾಜದ ಚರಿತ್ರೆಯೆಂದು ತಿಳಿದು ವಿಶ್ಲೇಷಣೆ ಮಾಡಿರುವುದು ಇದೇ ದೃಷ್ಟಿಯಿಂದ. ನಾವು ಇಂದು ಗಳಿಸಿರುವ, ಸುಸಂಸ್ಕೃತ ಜೀವನದ ತಳಪಾಯ ಎನಿಸಿರುವ 'ಮಾನವೀಯತೆ' ಎಂಬ ಪರಿಕಲ್ಪನೆಯು ಮಾನವನ ಸಾಂಘಿಕ ಬದುಕಿನಿಂದಲೇ ಬಂದುದು. ಅಷ್ಟೇ ಅಲ್ಲ, ಅನೇಕ ಬಾರಿ ಸಮಾಜವು ನಮ್ಮೆಲ್ಲರ ಬದುಕುಗಳ ಮೇಲೆ ಬೀರಿರುವ ಪರಿಣಾಮವನ್ನು ನಾವು ಮನಗಾಣದೇ ಇರಲೂ ಕೂಡ ಸಮಾಜವು ನಮ್ಮ ಒಳ-ಹೊರಗುಗಳೆಲ್ಲವನ್ನು ಇಡಿಯಾಗಿ ಆವರಿಸಿರುವುದೇ ಕಾರಣ. ಒಬ್ಬ ಪ್ರಸಿದ್ಧ ಮಾನವಶಾಸ್ತ್ರಜ್ಞನು ಉದ್ಗರಿಸಿದ ಹಾಗೆ, ''ನಾವೆಲ್ಲರೂ ಎಂದೆಂದೂ ನಮ್ಮ ತಲೆಗಳಲ್ಲಿ ಸಮಾಜವನ್ನು ಒಯ್ಯುತ್ತೇವೆ ಹಾಗೂ ಆದ್ದರಿಂದ ನಾವೆಲ್ಲರೂ ತಿರುಗಾಡುತ್ತಿರುವ ಸಮಾಜಗಳು''. ನಾವೆಲ್ಲರೂ ಹುಟ್ಟುವ ಮೊದಲೇ ಸಮಾಜವಿತ್ತು ಹಾಗೂ ನಮ್ಮ ಬದುಕಿನ ನಂತರ ಸಮಾಜವಿರುತ್ತದೆ. ನಮ್ಮೆಲ್ಲರ ಜೀವಿತದ ಕಾಲದಲ್ಲಿ ನಮ್ಮೆಲ್ಲರ ಮೇಲೆ ಸಮಾಜವು ಪರಿಣಾಮ ಬೀರುತ್ತಿರುವ ಹಾಗೆಯೇ ನಾವೂ ಸಹ ಲೆಕ್ಕವಿಲ್ಲದಷ್ಟು ರೀತಿಗಳಲ್ಲಿ ಸಮಾಜವನ್ನು ಬದಲಾಯಿಸುತ್ತಲೇ ಇರುತ್ತೇವೆ.

'ಸಮಾಜ' ಎಂದರೇನು? ನಾವೆಲ್ಲರೂ ಬಳಸುವ ಪದ್ಧತಿಗಳ, ನಮಗೆಲ್ಲರಿಗೂ ಇರುವ ಪಾತ್ರ-ಅಂತಸ್ತು, ಅಧಿಕಾರ-ಜವಾಬ್ದಾರಿಗಳ, ನಮ್ಮ ಗುಂಪು-ಸಮೂಹಗಳ, ನಮ್ಮ ನಡುವೆ ನಡೆಯುವ ಅಂತರ್‌ಕ್ರಿಯೆಗಳ ಸಂಕೀರ್ಣ ವ್ಯವಸ್ಥೆಯನ್ನೇ ನಾವು ಸಮಾಜವೆಂದು ಕರೆಯುತ್ತೇವೆ. ವ್ಯಕ್ತಿಯ ನಡವಳಿಕೆಗಳಿಂದ ಅನುಗಾಲವೂ ಸಾಮಾಜಿಕ ಬದಲಾವಣೆಗೆ ಸಂಸ್ಕೃತಿಯ ಆಧಾರ ದಿಂದಾಗಿ ಸಾಮಾಜಿಕ ಸ್ಥಿರತೆಗೆ ಒಳಪಡುವ ವ್ಯವಸ್ಥೆಯೇ ಸಮಾಜ. ಸಹಜವಾದ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ವ್ಯಕ್ತಿಗಳು ಪರಸ್ಪರರನ್ನು ಗುರುತಿಸಿ, ಗೌರವಿಸಿ ಸಮುದಾಯವು ಅವರವರಿಗೆ ನೀಡಿದ ಪಾತ್ರ-ಜವಾಬ್ದಾರಿಗಳನ್ನು ಒಪ್ಪಿಕೊಳ್ಳುವುದನ್ನು ಸಾಮಾಜಿಕ ವ್ಯವಸ್ಥೆ ಎಂದು ಕರೆಯಲಾಗಿದೆ.

ನಾವು 'ಸಮಾಜ'ವನ್ನು ಒಪ್ಪಿಕೊಳ್ಳುತ್ತೇವೆ ಎನ್ನುವುದು ಸಾಮಾಜಿಕ ಸತ್ಯದ ಒಂದು ಮುಖವಷ್ಟೇ. ಇದಕ್ಕಿಂತಲೂ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಸಮಾಜವಿಲ್ಲದೇ ನಾವು ಯಾರೂ ಬದುಕುಳಿಯಲು ಹಾಗೂ ಜೀವಿಸಲು ಸಾಧ್ಯವಿಲ್ಲ. ಮಗುವೊಂದು ಬೆಳೆದು ಪ್ರಬುದ್ಧ ವ್ಯಕ್ತಿಯಾಗುವಲ್ಲಿ ಕುಟುಂಬ, ಬಂಧುತ್ವ, ಗೆಳೆಯರ ಗುಂಪು, ಶೈಕ್ಷಣಿಕ ಸಂಸ್ಥೆಗಳು, ಹಾಗೂ ಇನ್ನೂ ಅನೇಕ ಸಮಾಜದ ಎಳೆಗಳು ಬಹುಮುಖ್ಯ ಪಾತ್ರ ವಹಿಸುತ್ತವೆ. ಸಂಸ್ಕೃತಿಯು ಇಂದಿನ ಪೀಳಿಗೆಯಿಂದ ಮುಂದಿನ ಪೀಳಿಗೆ ಗಳಿಗೆ ಹರಿದು ಹೋಗುವ ಜೀವವಾಹಿನಿಯಾದ ಸಾಮಾಜೀಕರಣವು ಸಮಾಜವು ನಮಗೆಂದು ನಿರ್ಮಿಸಿದ ಒಂದು ಅದ್ಭುತ ಪ್ರಕ್ರಿಯೆ. ಈ ವ್ಯವಸ್ಥೆಯಿಲ್ಲದಿದ್ದರೆ ಪ್ರತಿ ತಲೆಮಾರಿನಲ್ಲಿ ನಾವು ಬೆಂಕಿಯನ್ನೋ, ಗಾಲಿಯನ್ನೋ, ಕುಟುಂಬ ವ್ಯವಸ್ಥೆಯನ್ನೋ ಕಂಡುಹಿಡಿದುಕೊಳ್ಳುವ ಪರಿಸ್ಥಿತಿ ಬರುತ್ತಿತ್ತೇನೋ!

ಸಮಾಜಶಾಸ್ತ್ರಜ್ಞರು ವ್ಯಾಖ್ಯಾನಿಸುವಂತೆ ಜನರ ಒಂದು ಗುಂಪನ್ನು ನಾವು ಸಮಾಜವೆಂದು ಕರೆಯಲು ಕೆಲವು ಮಹತ್ವದ ಪೂರ್ವಾವಶ್ಯಕ ಅಂಶಗಳು ಅಲ್ಲಿರುವುದು ಅಗತ್ಯ. ಮೊದಲನೆಯ ದಾಗಿ ಯಾವುದೇ ಸಮಾಜವಿರಲಿ, ಅದಕ್ಕೆ ಅದರದೇ ಆದ ನಿರ್ದಿಷ್ಟ ಭೂಪ್ರದೇಶವಿರುವುದು ಅತ್ಯಗತ್ಯ. ಜೊತೆಗೆ ಈ ಭೂಪ್ರದೇಶದಲ್ಲಿರುವ ಜನಸಮೂಹದಲ್ಲಿ ಪರಸ್ಪರ ಸಂಪರ್ಕ-ಸಂವಹನಗಳೂ ಅಷ್ಟೇ ಅಗತ್ಯ. ದೀರ್ಘಕಾಲದ ಅಂತರ್‌ಕ್ರಿಯೆ ಗಳಿಂದಾಗಿ ಉಂಟಾಗುವ ಸಂಸ್ಕೃತಿ-ವ್ಯವಸ್ಥೆಯು ಸಮಾಜದ ಮೂರನೆಯ ಪೂರ್ವಾವಶ್ಯಕತೆ. ಆಧುನಿಕ ಸಮಾಜದ ಸಂದರ್ಭ ದಲ್ಲಿ ಒಂದು ಆಡಳಿತ ವ್ಯವಸ್ಥೆ ಹಾಗೂ ಅಧಿಕಾರದ ವಿತರಣೆಯ ವ್ಯವಸ್ಥೆಯೂ ಕೂಡ ಒಂದು ಅನಿವಾರ್ಯತೆಯೆಂದೇ ಹೇಳಲಾಗಿದೆ. ಇವೆಲ್ಲವುಗಳಿಂದುಂಟಾಗುವ ಗುಂಪುಗಳ, ಸಮುದಾಯಗಳ ಇಡಿಯಾದ ಸಮೂಹವನ್ನೇ ಸಮಾಜಶಾಸ್ತ್ರಜ್ಞರು 'ಸಮಾಜ'ವೆಂದು ಕರೆದಿದ್ದಾರೆ. ಭಾವನಾತ್ಮಕ ಬೆಳವಣಿಗೆ ಹಾಗೂ ಸ್ವಾತಂತ್ರ್ಯ ಸಮಾನತೆಗಳಂಥ ಮೌಲ್ಯಗಳ ಸಮಾಜವಿಲ್ಲದೇ ಇರುವುದು ಅಸಂಭವನೀಯ.

'ಸಮಾಜ'ದ ಉಗಮದ ಕುರಿತು ಅನೇಕ ಸೈದ್ಧಾಂತಿಕ ದೃಷ್ಟಿಕೋನಗಳೂ ಅವಕ್ಕೆ ಸಂಬಂಧಿಸಿದ ಚರ್ಚೆಗಳೂ ಜಗತ್ತಿನೆಲ್ಲೆಡೆಗೂ ನಡೆಯಲ್ಪಟ್ಟಿವೆ. ನೂರಾರು ವರ್ಷಗಳಿಂದ ಚಿಂತಕರು, ಸಮಾಜ ವಿಜ್ಞಾನಿಗಳು ಹಾಗೂ ದಾರ್ಶನಿಕರು ಈ ಕುರಿತು ಹತ್ತಾರು ರೀತಿಯ ಅಭಿಪ್ರಾಯಗಳನ್ನು ನೀಡಿದ್ದಾರೆ. ಅವನ್ನೆಲ್ಲ ಚರ್ಚಿಸುವುದು ಈ ಲೇಖನದ ಉದ್ದೇಶವಲ್ಲ. ಪ್ರತಿ ಸಮಾಜದ ಸಾಮಾಜಿಕ ರಚನೆಯು ಪ್ರತ್ಯೇಕವಾಗಿರುವುದಷ್ಟೇ ಅಲ್ಲ, ಐತಿಹಾಸಿಕವಾಗಿ ನೋಡಿದಾಗ ಪ್ರತಿಯೊಂದು ಸಮಾಜವು ಸಮಯದ ಹರವಿನಲ್ಲಿ ಬದಲಾಗಿದ್ದು, ಬೇರೆ-ಬೇರೆ ಆಯಾಮಗಳು ಬೇರೆ-ಬೇರೆ ಸಾಮಾಜಿಕ ಕಾರ್ಯಗಳನ್ನು ರೂಪಿಸಿದ್ದು ನಾವು ಇಲ್ಲಿ ಗಮನಿಸಬೇಕಾದ ಅಂಶ. ಸಮಾಜದ ಒಂದು ಪ್ರಮುಖ ಸಂಸ್ಥೆಯಾದ 'ರಾಜಕೀಯ'ವು ಸಮಾಜದ ಜೊತೆಗೆ ಹೊಂದಿರುವ ಸಂಬಂಧಗಳನ್ನು ಹಾಗೂ ಇಂಥ ಸಂಬಂಧಗಳಿಂದಾಗಿ ಎರಡೂ ಸ್ತರಗಳಲ್ಲಿ ಉಂಟಾಗ ಬಹುದಾದ ಬದಲಾವಣೆಗಳನ್ನೂ ವಿಶ್ಲೇಷಿಸುವ ಒಂದು ಪ್ರಯತ್ನ ವನ್ನು ಇಲ್ಲಿ ಮಾಡಲಾಗಿದೆ.

ರಾಜಕೀಯ ವ್ಯವಸ್ಥೆಯು ಸಾಮಾಜಿಕ ವ್ಯವಸ್ಥೆಯ ಒಂದು ಪ್ರಮುಖ ಅಂಗವೆಂಬುದನ್ನು ಹೇಳಿದೆನಲ್ಲವೇ? ಈ ವಿಶ್ಲೇಷಣೆಗಿಂತ ಮೊದಲು 'ರಾಜಕೀಯ' ಎಂಬ ಸಂಸ್ಥೆಯ ಸ್ವರೂಪ, ರಚನೆ,







ಕಾರ್ಯ ಹಾಗೂ ಉದ್ದೇಶಗಳತ್ತ ಸ್ವಲ್ಪ ದೃಷ್ಟಿ ಹರಿಸುವುದು ಉಚಿತ. ಇಂಥ ವಿವರಣೆಯಿಂದಾಗಿ ವ್ಯಕ್ತಿಯ ಹಾಗೂ ಸಮಾಜದ ಸಾಮಾಜಿಕ ಮತ್ತು ರಾಜಕೀಯ ಅಂಶಗಳತ್ತ ರಚನಾತ್ಮಕ, ಕಾರ್ಯಾತ್ಮಕ ಹಾಗೂ ಸಂಘರ್ಷಾತ್ಮಕ ಕೋನಗಳಿಂದ ತುಸು ಬೆಳಕು ಹರಿಸಲೂ ಕೂಡ ಸಾಧ್ಯವಾದೀತು.

ರಾಜಕೀಯವೆಂದರೆ ಅಧಿಕಾರ ಮತ್ತು ಶಕ್ತಿಗಳ ಬೆನ್ನಟ್ಟುವಿಕೆ ಹಾಗೂ ಹಂಚುವಿಕೆಯ ಪ್ರಕ್ರಿಯೆ ಎನ್ನುವ ಸಾಮಾನ್ಯರ ವ್ಯಾಖ್ಯೆ ಈ ಪರಿಕಲ್ಪನೆಯ ಪೂರ್ಣ ಸತ್ಯವನ್ನು ಬಿಂಬಿಸುವುದಿಲ್ಲ. ವಿಕಾಸಗೊಂಡ ಸಮಾಜದಲ್ಲಿ ರಾಜಕೀಯವು ಒಂದು ಜವಾಬ್ದಾರಿಯುತ ಕಸರತ್ತು. ಜರ್ಮನಿಯ ಪ್ರಸಿದ್ಧ ಸಮಾಜಶಾಸ್ತ್ರಜ್ಞರಾದ ಮಾಕ್ಸ್ ವೇಬರ್ ಹೇಳಿದಂತೆ ಶಕ್ತಿಯಿಲ್ಲದೇ ಅಧಿಕಾರವು ಇರಲು ಸಾಧ್ಯವಿಲ್ಲವಾದರೂ ಎಲ್ಲ ಶಕ್ತಿಯೂ ಅಧಿಕಾರವಾಗಿ ಮಾರ್ಪಡುವುದಿಲ್ಲ. ಸಾಂಪ್ರದಾಯಿಕ, ಜನಾಕರ್ಷಕ ಹಾಗೂ ಕಾನೂನುಬದ್ಧ ಅಧಿಕಾರಗಳೆಲ್ಲವೂ ಸಮಾಜದ ನೀತಿ-ನಿರ್ಬಂಧನೆಗೆ ಒಳಪಟ್ಟಿರುವ ಶಕ್ತಿಯ ಅಭಿವ್ಯಕ್ತಿಗಳಷ್ಟೇ. ರಾಜಕೀಯ ವ್ಯವಸ್ಥೆಯೆಂದರೆ ಕೆಲವು ವ್ಯಕ್ತಿಗಳು ಹಾಗೂ ಕೆಲವು ಗುಂಪುಗಳು ಉಳಿದ ವ್ಯಕ್ತಿಗಳು ಹಾಗೂ ಗುಂಪುಗಳ ಮೇಲೆ ನಿಯಮಬದ್ಧವಾಗಿ ಹಾಗೂ ಸಾಂಸ್ಥಿಕವಾಗಿ ಪ್ರಭಾವ ಬೀರುವ ವ್ಯವಸ್ಥೆ ಎಂದರ್ಥ. ಸಾಮಾಜಿಕ ಜೀವನದಲ್ಲಿ ಸಂಪನ್ಮೂಲಗಳ ಕೊರತೆಯಿರುವುದರಿಂದ ವ್ಯಕ್ತಿಗಳ ನಡುವೆ ಸಂಪನ್ಮೂಲವಾಗಿ ಈ ಸಂಪನ್ಮೂಲಗಳು ಹಂಚಲ್ಪಡುತ್ತವೆ. ಇದು ಎಲ್ಲ ಸಮಾಜಗಳಲ್ಲಿಯೂ ನಡೆಯುವ ಒಂದು ಸ್ವಾಭಾವಿಕ ಕ್ರಿಯೆ. ಹೀಗೆ ಸಂಪನ್ಮೂಲಗಳ ಹಂಚುವಿಕೆಯಲ್ಲಿ ಕಾರ್ಯ ನಿರ್ವಹಿಸುವ ಅಂಶಗಳ ಕ್ರೋಢೀಕರಿಸಿದ ವ್ಯವಸ್ಥೆಯನ್ನೇ ನಾವು ರಾಜಕೀಯವೆನ್ನುತ್ತೇವೆ. ಸುಲಭವಾಗಿ ಹೇಳುವುದಾದರೆ 'ರಾಜಕೀಯ'ವು ಶಕ್ತಿ-ಸಾಮರ್ಥ್ಯ-ಅಧಿಕಾರಗಳ ಕುರಿತಾದದ್ದು, ಅವು ಯಾರಿಗೆ ಲಭ್ಯವಿವೆ, ಹೇಗೆ ದೊರಕಲ್ಪಟ್ಟಿವೆ, ಹೇಗೆ ಬಳಸಲ್ಪಡುತ್ತವೆ ಹಾಗೂ ಯಾವ ಉದ್ದೇಶಕ್ಕಾಗಿ ಎಂಬುವೇ ಮುಂತಾದ ಪ್ರಶ್ನೆಗಳು 'ರಾಜಕೀಯ'ದ ವ್ಯವಸ್ಥಿತ ಅಧ್ಯಯನದಲ್ಲಿ ಬಹುಮುಖ್ಯವಾಗುತ್ತವೆ.

'ರಾಜಕೀಯ' ಮತ್ತು 'ಸಮಾಜ'ಇವೆರಡು ಪರಿಕಲ್ಪನೆಗಳ ಒಟ್ಟಾದ - ಇಡಿಯಾದ ಅಭ್ಯಾಸದಲ್ಲಿ 'ರಾಷ್ಟ್ರ' ಅಥವಾ ರಾಜ್ಯದ ವಿಚಾರವೂ ಸಹ ಮಹತ್ವಪೂರ್ಣವೆನಿಸುತ್ತದೆ. 'ರಾಷ್ಟ್ರ'ವು ಕಾನೂನುಬದ್ಧ ಬಲಪ್ರಯೋಗದ ಶಕ್ತಿಯನ್ನು ಹೊಂದಿರುವ ಏಕ ಮಾತ್ರ ಸಾಮಾಜಿಕ ಸಂಸ್ಥೆಯಾಗಿರುವುದರಿಂದ ಸ್ವಾಭಾವಿಕವಾಗಿಯೇ ಈ ಸಂಸ್ಥೆಯ ಶಕ್ತಿಯು ಒಂದು ನಿಶ್ಚಿತ ಭೂಪ್ರದೇಶಕ್ಕೆ ಸೀಮಿತ ವಾಗಿರುವುದು ಕಾರ್ಯಾತ್ಮಕವಾಗಿ ಅವಶ್ಯಕವಾಗುತ್ತದೆ. ಆಧುನಿಕ 'ರಾಷ್ಟ್ರದ' ಕಲ್ಪನೆ ಇತ್ತೀಚಿನದಾಗಿದ್ದರೂ ಇದು 'ರಾಜಕೀಯ' ವ್ಯವಸ್ಥೆಯ ಗೋಚರ ಹಾಗೂ ಸ್ಪಷ್ಟರೂಪದ ಪ್ರತಿನಿಧಿಯಾಗಿದೆ.

ಒಟ್ಟಿನಲ್ಲಿ ಹೇಳುವುದಿದ್ದರೆ 'ಸಮಾಜ' ಹಾಗೂ 'ರಾಜಕೀಯ'ಗಳ ನಡುವಿನ ಸಂಬಂಧವು ಅತ್ಯಂತ ಗಾಢ ಹಾಗೂ ಸಂಕೀರ್ಣವಾದ ಅಂಶಗಳನ್ನು ಹೊಂದಿದ್ದು ನೂರಾರು ವರ್ಷ ಗಳಿಂದ ಚಿಂತಕರ ಗಮನ ಸೆಳೆದಿದೆ. ಆಧುನಿಕ ಕೈಗಾರಿಕಾ ಸಮಾಜ ದಲ್ಲಿ ಆರ್ಥಿಕ, ತಾಂತ್ರಿಕ, ಸಾಂಸ್ಕೃತಿಕ ಅಂಶಗಳು ಜೊತೆಗೆ ಸೇರಿ ಸಮಾಜ ಹಾಗೂ ರಾಜಕೀಯದ ನಂಟನ್ನು ಮತ್ತಷ್ಟು ಹಿಗ್ಗಿಸಿವೆ. ಇಂಥ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಪ್ರಸ್ತುತ ಲೇಖನವು ಭಾರತೀಯ ಸಾಮಾಜಿಕ-ಸಾಂಸ್ಕೃತಿಕ ಸಂಬಂಧದಲ್ಲಿ ರಾಜಕೀಯದ ಪಾತ್ರದ ಕುರಿತು ವಿಮರ್ಶಿಸಲೆಳೆಸಿದೆ.

## ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ರಾಜಕೀಯ ಪ್ರಭಾವ

ರಾಷ್ಟ್ರದ ಬೆಳವಣಿಗೆ ಹಾಗೂ 'ರಾಜಕೀಯ'ದ ಸ್ಪಷ್ಟ ಚಿತ್ರಣ ನೀಡುವಲ್ಲಿ ಆ ರಾಷ್ಟ್ರದ ಸಾಮಾಜಿಕ ವ್ಯವಸ್ಥೆಯ ವಿಕಸನ ಮಹತ್ವದ್ದು. ಉದಾಹರಣೆಗೆ ರೂಪಾತ್ಮಕವಾದ ರಾಜಕೀಯವು ಬಹುಶಃ ಕೃಷಿ ಸಮಾಜದ ವಿಕಾಸದೊಂದಿಗೆ ಹುಟ್ಟಿಕೊಂಡಿರಬೇಕು. ಹಾಗೆಯೇ ಬೆಳೆಯುತ್ತಾ ಔದ್ಯೋಗಿಕ ಹಾಗೂ ಔದ್ಯಮಿಕೋತ್ತರ ಸಮಾಜಗಳಲ್ಲಿ ರಾಜಕೀಯವು ಅತ್ಯಂತ ಪ್ರಬಲ ಸಂಸ್ಥೆಗಳ ಲ್ಲೊಂದೆನಿಸಿದೆ. ಭಾರತದ ಸಾಮಾಜಿಕ ವಿಶ್ಲೇಷಣೆಯಲ್ಲಿ ಈ ವಿಷಯ ಮುಖ್ಯವೆನಿಸುತ್ತದೆ. ಚಾರಿತ್ರಿಕವಾಗಿ ನೋಡಿದರೆ ಬ್ರಿಟಿಷರು ಭಾರತಕ್ಕೆ ಬರುವ ಮೊದಲು ಯಾವ ಕಾಲಘಟ್ಟದಲ್ಲಿಯೂ ಇಂದಿನ ಭಾರತವೆಂಬ ಭೂಭಾಗವು ಒಂದೇ ಆಳ್ವಿಕೆಯಲ್ಲಿ ಇದ್ದಿರಲಿಲ್ಲ. ಪ್ರಜಾಪ್ರಭುತ್ವದ ಕಲ್ಪನೆಯಂತೂ ನಮ್ಮ ಮಟ್ಟಿಗೆ ಕೇವಲ ಐದು ದಶಕಗಳಷ್ಟು ಹಳೆಯದು, ಅಷ್ಟೇ. ಪ್ರಜಾಪ್ರಭುತ್ವದ ಯಶಸ್ಸಿಗೆ ಅಗತ್ಯವಾದ ಆರ್ಥಿಕ ಅಭಿವೃದ್ಧಿ, ಸಾಕ್ಷರತೆ, ಸರ್ಕಾರದ ಅಧಿಕಾರದ ಮೇಲೆ ನಿಯಂತ್ರಣ, ಭಿನ್ನಾಭಿಪ್ರಾಯವನ್ನು ಒಪ್ಪಿಕೊಳ್ಳುವ ತಾಳ್ಮೆ, ಮಾಹಿತಿಯ ಲಭ್ಯತೆ, ಶಕ್ತಿಯ ವಿಕೇಂದ್ರೀಕರಣ, ಜವಾಬ್ದಾರಿಯುತ ಸ್ವಾತಂತ್ರ್ಯ ಹಾಗೂ ಸಮಾನತೆಗಳೂ ಸಹ ನಮ್ಮ ಸಮಾಜದಲ್ಲಿ ಇತ್ತೀಚೆಗಷ್ಟೇ ಒಪ್ಪಿಕೊಂಡು ಚರ್ಚಿತವಾಗುತ್ತಿರುವ ವಿಚಾರಗಳು. ವಿಶೇಷವಾಗಿ ಜಾತಿ-ವರ್ಗಗಳಿಂದ ಸ್ಥಿರೀಕರಿಸಲ್ಪಟ್ಟ ಸಮಾಜ ಹಾಗೂ ತತ್ವಾದರ್ಶವಾಗಿ ಒಪ್ಪಿಕೊಳ್ಳಲ್ಪಟ್ಟ ಸಮಾನತೆಯ ಆಧಾರದ ರಾಜಕೀಯ ಇವೆರಡೂ ಒಟ್ಟಾಗಿ ಚರ್ಚೆಗೆ, ಚಿಂತನಕ್ಕೆ ಒಳಗಾಗುವುದು ಅಗತ್ಯವಷ್ಟೇ ಅಲ್ಲ, ಅನಿವಾರ್ಯವೂ ಕೂಡ.

## ಕೆಲವು ಸಮಸ್ಯೆಗಳು ಮತ್ತು ಸವಾಲುಗಳು

ಭಾರತೀಯ ಸಮಾಜದಲ್ಲಿರುವ ವೈವಿಧ್ಯತೆಗಳ ಕುರಿತು ಪ್ರಾರಂಭದಲ್ಲಿಯೇ ಉಲ್ಲೇಖಿಸಲಾಗಿದೆ. ಇಂಥ ವಿವಿಧ ಗುಂಪುಗಳಿಂದಾಗಿ ಅನೇಕ ಬಾರಿ ಉದ್ವೇಗಕಾರಿ ಬೆಳವಣಿಗೆಗಳೂ, ಆತಂಕಕಾರಿ ಪ್ರಚೋದನೆಗಳೂ, ಕೆಲವೊಮ್ಮೆ ಸಂಘರ್ಷಗಳೂ ಕಾಣಿಸಿಕೊಂಡು ಸಾಮಾಜಿಕ ಸ್ಥಿರತೆಗೆ ಸವಾಲೆಸೆಯುತ್ತವೆ. ಈ

ಸಮಸ್ಯೆಗಳಿಗೆ ಕಾರಣವನ್ನೂ, ಸಮಸ್ಯೆಗಳಿಂದಾಗುವ ಪರಿಣಾಮಗಳನ್ನೂ ಭಾರತೀಯ-ರಾಜಕೀಯ ಸಾಮಾಜಿಕ ರಂಗಗಳಲ್ಲಿ ನೋಡಿ ವಿಮರ್ಶಿಸಬಹುದು.

ಭಾರತದಲ್ಲಿ, ಇತ್ತೀಚೆಗಿನ ವರ್ಷಗಳಲ್ಲಿ, ರಾಜಕೀಯದಲ್ಲಿ ಸಾಂಪ್ರದಾಯಿಕವಾದ ಪ್ರಜೆಗಳ ಭಾಗವಹಿಸುವಿಕೆಯ ಪ್ರಮಾಣ ಗಣನೀಯವಾಗಿ ಇಳಿಮುಖವಾಗುತ್ತಿದೆ. ಅನೇಕ ಚುನಾವಣೆಗಳಲ್ಲಿ ಅರ್ಧದಷ್ಟು ಮತದಾರರು ತಮ್ಮ ಮತದಾನದ ಹಕ್ಕನ್ನೂ ಕೂಡ ಚಲಾಯಿಸುವುದಿಲ್ಲ. ಇಂದು ಶ್ರೀಸಾಮಾನ್ಯನಿಗೆ 'ರಾಜಕೀಯ'ವೆಂದರೆ ಹಾಸ್ಯಾಸ್ಪದ ಅಥವಾ ಬಯ್ಗಳದ ಶಬ್ದವಾಗಿ ಪರಿಣಮಿಸಿದೆ. ಅಧಿಕಾರದ ವಿಕೇಂದ್ರೀಕರಣ ಹಾಗೂ 'ತೃಣಮೂಲ' (Gross Root) ಅಧಿಕಾರ ಅಥವಾ ಸಾಮಾನ್ಯ ನಾಗರೀಕನಿಗೆ ಅಧಿಕಾರಗಳು ಇನ್ನೂ ಶಾಬ್ದಿಕ ಸತ್ಯಗಳಾಗಿಯೇ ಮುಂದುವರೆದಿವೆ. ಆಸಕ್ತ ಗುಂಪುಗಳ (Interest groups) ಹರವು ಹಾಗೂ ಪ್ರಭಾವಗಳು ರಾಜಕೀಯ ಕ್ಷೇತ್ರಗಳಲ್ಲಿ ಗಣನೀಯವಾಗಿ ಹೆಚ್ಚಾಗಿದ್ದು, ಗಣ್ಯ (Elite)ರ ಶಕ್ತಿವರ್ಧನೆಯಲ್ಲಿ ಇಂಥ ಆಸಕ್ತ ಗುಂಪುಗಳು ಹೆಚ್ಚಾಗಿ ಅಭಿರುಚಿ ತೋರಿಸಲು ಆರಂಭಿಸಿರುವುದು ಗಮನಾರ್ಹ. ರಾಜ್ಯ ಹಾಗೂ ಕೇಂದ್ರದ ಮಟ್ಟಗಳಲ್ಲಿ ಸರ್ಕಾರದ ಗಾತ್ರ ಹಾಗೂ ಶಕ್ತಿಗಳು ತೀವ್ರಗತಿಯಲ್ಲಿ ಹೆಚ್ಚಾಗಿದ್ದು ಆ ಹೊರೆ ಹಾಗೂ ಒತ್ತಡವು ಸಾಮಾನ್ಯ ಪ್ರಜೆಯ ಮೇಲೆ ನಿರಂತರವಾಗಿ ಬೀಳುತ್ತಿದೆ. ತೆರೆದ ಬಹುಜನ ಭಾಗವಹಿಸುವಿಕೆಯ, ಪ್ರಜಾಪ್ರಭುತ್ವ ಪದ್ಧತಿಯು ದೇಶದೆಲ್ಲೆಡೆಗಳಲ್ಲಿ ತಾತ್ವಿಕ ರೂಪದಲ್ಲಿ ತಿಳಿಸಲ್ಪಡುತ್ತದೆ. ಆದರೆ ಹತ್ತು-ಹಲವು ಸಮಸ್ಯೆಗಳಿಂದಾಗಿ ಇಂಥ ಪದ್ಧತಿಯ ಆಚರಣೆ ಬಳಕೆಗೆ ಬರುವುದು ಅಸಂಭವವೆಂದೇ ನಾಗರಿಕನು ಅಂದುಕೊಂಡಿ ದ್ದಾನೆ. ಸಾಮಾಜಿಕ ಪಿಡುಗುಗಳಾದ ಜಾತಿ, ವರ್ಗ, ಕೋಮು ವೈಷಮ್ಯಗಳು ರಾಜಕೀಯ ರಂಗಕ್ಕೆ ವಿಸ್ತರಿಸಲ್ಪಟ್ಟಿದ್ದರ ಜೊತೆಗೆ ರುಷುವತ್ತು, ಭೂಗತ ವ್ಯವಹಾರಗಳು ಹಾಗೂ ಅಪರಾಧ ಜಗತ್ತಿನ ನೇರ ಸಂಪರ್ಕದಿಂದಾಗಿ ರಾಜಕೀಯವು ಹಲವು ಸ್ತರಗಳಲ್ಲಿ ಕಲುಷಿತವಾಗಿದೆ. ಬಹುಮುಖ್ಯವಾಗಿ ದೇಶದ ಸಾಮಾನ್ಯ ಪ್ರಜೆಗಳು ಹಾಗೂ ಆಳುವ ವರ್ಗದ ನಡುವಿರಬೇಕಾದ ವಿಶ್ವಾಸ-ನಂಬಿಕೆಗಳ ಕೊರತೆಯಿಂದಾಗಿ ಆಳವಾದ ಕಂದಕವೇರ್ಪಟ್ಟಿದ್ದು, ಈ ಕಂದಕವು ಮುಚ್ಚದ ವಿನಃ ರಾಜಕೀಯವು ಸಾಮಾಜಿಕ ಅಗತ್ಯತೆಗಳಿಗೆ ಸ್ಪಂದಿಸುವ ಸಾಧ್ಯತೆಯಿಲ್ಲ. ವಿಶೇಷವಾಗಿ ಭಾರತದ ರಾಜಕೀಯದಲ್ಲಿ 'ಜಾತಿ'ಯ ಬಳಕೆ ಇತ್ತೀಚಿಗಂತೂ ಸಾಮಾನ್ಯನಿಗೆ ದಿಗ್ಭ್ರಮೆ ಮೂಡಿಸಿದೆ. 'ಜಾತಿ'ಯು ಒಂದು ಸಾಂಸ್ಕೃತಿಕ ದಬ್ಬಾಳಿಕೆಯ ರೂಪದಿಂದ ವಿಸ್ತರಿಸಿ ರಾಜಕೀಯ ಚೌಕಾಯಿಷಿಯಲ್ಲಿ ಪ್ರಮುಖ ಸಾಧನವಾಗಿ ಮಾರ್ಪಟ್ಟಿದೆ. ಮತಗಳ ಲೆಕ್ಕಾಚಾರದಲ್ಲಿ, ಅಭ್ಯರ್ಥಿಗಳ ಆಯ್ಕೆಯಲ್ಲಿ, ಪ್ರದೇಶಗಳ ರಾಜಕೀಯ ಸಮತೋಲನದಲ್ಲಿ, ಉಳಿದ ಪಕ್ಷ-ಪಂಗಡಗಳನ್ನು ಹತ್ತಿಕ್ಕುವಲ್ಲಿ ಅತ್ಯಂತ ವ್ಯವಸ್ಥಿತ ಮಾದರಿಯಲ್ಲಿ 'ಜಾತಿ'ಯು ಬಳಸಲ್ಪಡುತ್ತಿರುವುದರಿಂದ ಇಂದಿನ ರಾಜಕೀಯವು ಜಾತಿ-ಕೋಮುಗಳ ರಾಜಕೀಯವೇ ಆಗಿ ಪರಿಣಮಿಸಿದೆಯೆನ್ನಲಡ್ಡಿಯಿಲ್ಲ. ಇಲ್ಲಿಯೂ ಸಹ 'ಪ್ರಬಲ ಜಾತಿ'ಗಳು ಹಾಗೂ 'ದುರ್ಬಲ ಜಾತಿ'ಗಳು ಎಂಬ ವಿಭಜನೆ ಆಯಾ ಜಾತಿಯ ರಾಜಕೀಯ ಪ್ರಭಾವದ ಮೇಲೆ ಅವಲಂಬಿಸಿದೆ.

ಈ ಎಲ್ಲಾ ಸಮಸ್ಯೆಗಳೂ ನೀರಿನಲ್ಲಿದ್ದ ಮಂಜುಗಡ್ಡೆಯ ಮೇಲಿನ ಭಾಗ ಮಾತ್ರ. ಸಮಸ್ಯೆಗಳ ಬುಡವು ಆಳದಲ್ಲಿ ಮುಳುಗಿರುವುದರಿಂದ ಅದು ಸುಪ್ತವಾಗಿ ಹಾಗೂ ಅವ್ಯಕ್ತರೂಪದಲ್ಲಿ ಕಾರ್ಯ ನಡೆಸುತ್ತದೆ. ಈ ಎಲ್ಲ ಸಮಸ್ಯೆಗಳ ಅಮೂಲಾಗ್ರ ವಿಶ್ಲೇಷಣೆಯಿಂದಲಷ್ಟೇ ಸತ್ಯದ ನಿಜಸ್ವರೂಪ ಹೊರಬರಲು ಸಾಧ್ಯ.

### ರಾಜಕೀಯ ಸಾಮಾಜೀಕರಣ

'ಸ್ವಾತಂತ್ರ್ಯ ಸಿಕ್ಕಿದಾಗ ನಾವು ಪ್ರಜಾಪ್ರಭುತ್ವ ಹಾಗೂ ಸಮಾನತೆಯ ಆಧಾರ ಸಮಾಜಗಳಿಗೆ ಸಿದ್ಧವಾಗಿರಲಿಲ್ಲ' ಎಂದು ಅನೇಕರು ಉದ್ಗರಿಸುವುದನ್ನು ನಾವು ಕೇಳುತ್ತೇವೆ. ಈ ವಾದವು ಪೂರ್ಣ ಸತ್ಯವಲ್ಲವೆಂಬುದು ನಿಜವಾದರೂ ಇದರಿಂದಾಗಿ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಈ ಮೊದಲೇ ತಿಳಿಸಿದಂತೆ ಶಿಕ್ಷಣ, ಆರ್ಥಿಕ ಅಭಿವೃದ್ಧಿ ಹಾಗೂ ಎಚ್ಚೆತ್ತ ಸಮೂಹಗಳೇ ಪ್ರಜಾಪ್ರಭುತ್ವ ಮಾದರಿಯ ಆಳ್ವಿಕೆಯ ಆಧಾರಸ್ತಂಭಗಳು. ಸ್ವಾತಂತ್ರ್ಯಾನಂತರದ ಕಳೆದ ಐವತ್ತು ವರ್ಷಗಳಲ್ಲಿ ಈ ರಂಗಗಳಲ್ಲಿ ನಮ್ಮ ಸಾಧನೆಗಳು ಬಹಳ ತೃಪ್ತಿದಾಯಕವಾಗಿಲ್ಲ. 'ಕಲ್ಯಾಣ ರಾಜ್ಯ'ದ ಕನಸನ್ನು ಕಾಣುತ್ತ ಎಷ್ಟೋ ಬಾರಿ ನಾವು ಪ್ರಜೆಗಳ ನಿತ್ಯ ಜೀವನದ ಪ್ರಾಥಮಿಕ ಅವಶ್ಯಕತೆಗಳನ್ನು ಪೂರೈಸುವಲ್ಲಿಯೂ ಒಂದು ದೇಶವಾಗಿ ಕೈಸೋತಿದ್ದೇವೆ ಎನ್ನುವುದು ಚಿಂತೆಯ ಮಾತು.

ಬಹುಮುಖ್ಯವಾಗಿ, ಪ್ರಜೆಗಳು ರಾಜಕೀಯ ಪ್ರಜ್ಞೆ ಬೆಳೆಸಿಕೊಳ್ಳುವಲ್ಲಿ ನಮ್ಮ ಸಾಮಾಜೀಕರಣದ ನಿಯೋಗಿಗಳಾದ ಕುಟುಂಬ, ಗೆಳೆಯರ ಗುಂಪು, ಶಾಲೆ, ಸಮೂಹ ಮಾಧ್ಯಮ ಮುಂತಾದವು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲವೆನ್ನುವುದು ಗಮನಾರ್ಹ. ರಾಜಕೀಯ ಪಕ್ಷಗಳು, ರಾಜಕೀಯ ಧುರೀಣರು ಹಾಗೂ ರಾಜಕೀಯ ಚಟುವಟಿಕೆಗಳು ಸಮಾಜದ ಒಂದು ಅಗತ್ಯದ ಅಂಗವೇ ಅಲ್ಲವೆಂದು ಅನೇಕ ಭಾರತೀಯರು ತಿಳಿದಂತಿದೆ. ರಾಜಕೀಯದ ಸಕಾರಾತ್ಮಕ ಕಾರ್ಯಗಳ ಮತ್ತು ಅಂತಹ ಸಾಧ್ಯತೆಗಳ ಹೆಚ್ಚುವಿಕೆಯ ಕುರಿತು ನಮ್ಮ ಯುವ ಪೀಳಿಗೆಗಳಲ್ಲಿ ಅರಿವು ಮೂಡಬೇಕು. ಸಾಮಾಜೀಕರಣದ ನಿಯೋಗಿಗಳಾದ ಕುಟುಂಬ, ಶಾಲೆ, ಸಮೂಹ ಮಾಧ್ಯಮಗಳು ಈ ದಿಸೆಯಲ್ಲಿ ಹೆಚ್ಚು ಗಂಭೀರವಾಗಿ ತಮ್ಮನ್ನು ತೊಡಗಿಸಿಕೊಳ್ಳುವುದು ಅತ್ಯಗತ್ಯವಾಗಿದೆ. ಜೊತೆಗೆ ಇಂದಿನ ರಾಜಕೀಯ ಧುರೀಣರ 'ಆರ್ಥಿಕ' ಮತ್ತು 'ರಾಜಕೀಯ' ಸಮಸ್ಯೆಗಳತ್ತ ವಿಶೇಷ





ಒಲವು ತೋರುವ ಹಾಗೂ 'ಸಾಮಾಜಿಕ-ಸಾಂಸ್ಕೃತಿಕ' ಸಮಸ್ಯೆಗಳ ವಿಶ್ಲೇಷಣೆಯಿಂದ ದೂರವಾಗಿರುವ ಪ್ರವೃತ್ತಿಯೂ ಸಹ ಸಾಮಾಜೀಕರಣದ ನಿಯೋಗಿಗಳು ರಾಜಕೀಯದಿಂದ ಮುಂದಿನ ಪೀಳಿಗೆಗಳನ್ನು ದೂರಿಡುವಂತೆ ಮಾಡುವಲ್ಲಿ ಕೊಡುಗೆ ನೀಡಿವೆ.

ಸಮಕಾಲೀನ ಸಮಾಜ-ರಾಜಕೀಯಗಳ ಪರಸ್ಪರ ಸಂಬಂಧದ ಚರ್ಚೆಯಲ್ಲಿ ಮತ್ತೊಂದು ಅಂಶವನ್ನು ಗಮನಿಸುವುದು ಅವಶ್ಯಕ. ಇಂದು ನಮ್ಮೆದುರಿಗೆ ಎರಡು ರೀತಿಯ ಮೌಲ್ಯಗಳು ಸ್ಪರ್ಧಿಸುತ್ತಿವೆ. ಏಣಿ-ಶ್ರೇಣಿ, ಅಖಂಡತೆ, ಬಹುಸಂಖ್ಯಾತತೆಗಳು ಸಾಮಾಜಿಕ ಮೌಲ್ಯಮಾಪನದಲ್ಲಿ ಗಂಭೀರ ಪಾತ್ರ ವಹಿಸುತ್ತಿದರೆ, ಸಮಾನತೆ, ಸಮಾಜವಾದ, ಪ್ರಜಾಪ್ರಭುತ್ವ, ಜಾತ್ಯಾತೀತತೆ ಮುಂತಾದವು ಸಂವಿಧಾನಾತ್ಮಕ ಮೌಲ್ಯಗಳಾಗಿ ಒಪ್ಪಿಕೊಳ್ಳಲ್ಪಟ್ಟಿವೆ. ಅನೇಕ ಸಲ ಈ ಎರಡು ಮೌಲ್ಯಗಳ ನಡುವೆ ಉಂಟಾಗುವ ತಾತ್ವಿಕ ಘರ್ಷಣೆಗಳನ್ನು ಕೇವಲ ಸಾಮಾಜಿಕ ಪರಿವರ್ತನೆಯ ದಾರಿಯಲ್ಲಿ ಸಿಗುವ ಹಾಗೂ ಎದುರಿಸಬೇಕಾದ ಬಿಕ್ಕಟ್ಟುಗಳು ಎಂದು ಲಘುವಾಗಿ ಪರಿಗಣಿಸುವಂತಿಲ್ಲ. ಬದಲಾಗಿ ವರ್ತಮಾನ ಮಾದರಿಯನ್ನು ಸತ್ಯವೆಂದು ಒಪ್ಪಿ ಅದೇ ದೃಷ್ಟಿಕೋನದಿಂದ ಇಂದಿನ ಭಾರತದ ಇತಿಹಾಸವು ನಮಗೆ ಕಲಿಸಿರುವ ಪಾಠವೆಂದರೆ ಈ ಸಮಾಜಕ್ಕೆ ಶಕ್ತಿಯಿದೆ; ಬಿಡಿಭಾಗಗಳೆಲ್ಲವನ್ನು ಅಮೂರ್ತಮಟ್ಟದಲ್ಲಿಯೂ ಇಡಿಯಾಗಿ ಜೋಡಿಸಿ ನೋಡುವ ದರ್ಶನದ ಸಾಮರ್ಥ್ಯವಿದೆ. ನಮ್ಮ ರಾಜಕೀಯ ಸಾಮಾಜೀಕರಣ ಪ್ರಕ್ರಿಯೆಯು ಈ ಎಲ್ಲಾ ಅಂಶಗಳನ್ನು ಗಮನಿಸಿ ಯುವ ಪೀಳಿಗೆಯನ್ನು ದಕ್ಷ ಹಾಗೂ ಜವಾಬ್ದಾರಿಯುತ ಪೀಳಿಗೆಯಾಗಿ ರೂಪಿಸುವಂತೆ ನಡೆಯಬೇಕು. ಸಾಮಾಜಿಕ ಮತ್ತು ರಾಜಕೀಯ ಪ್ರಕ್ರಿಯೆಗಳು ಎರಡು ಒಂದಕ್ಕೊಂದು ಪೂರಕವಷ್ಟೇ ಅಲ್ಲ, ಅವು ಪರಸ್ಪರಾವಲಂಬಿಗಳು ಹಾಗೂ ಸಮ್ಯಕ್ ಅಂತರ್‌ಕ್ರಿಯೆಯಲ್ಲಿ ತೊಡಗಿರುವಂತಹವು ಎಂಬ ಅಂಶವನ್ನು ಸಾಮಾಜೀಕರಣ ಪ್ರಕ್ರಿಯೆಯು ಯುವ ಪೀಳಗೆಗಳ ಮೇಲೆ ಅಚ್ಚೊತ್ತಬೇಕು.

ಸುಪ್ತ ಸಾಮಾಜೀಕರಣದ ಜೊತೆಗೆ ವ್ಯಕ್ತರೂಪದ ಹಾಗೂ ಔಪಚಾರಿಕವಾದ ಶಿಕ್ಷಣವೂ ಸಹ ಈ ಕೆಲಸದಲ್ಲಿ ನೆರವಾಗುವುದು ಅತ್ಯಗತ್ಯ. ಇದನ್ನು ಮನಗಂಡೇ ಗಾಂಧೀಜಿಯವರು ತಮ್ಮ 'ರಾಮರಾಜ್ಯ'ದ ಕಲ್ಪನೆಯಲ್ಲಿ ಶಿಕ್ಷಣ ವ್ಯವಸ್ಥೆಗೆ ಪ್ರಮುಖ ಸ್ಥಾನ ನೀಡಿದ್ದರು. ಅಂಬೇಡ್ಕರ್ ಅವರು ಹೇಳಿದಂತೆ 'ಶಿಕ್ಷಣ ಪ್ರಸಾರವೆಂದರೆ ಸುಖೀರಾಜ್ಯದ ಸಾಧನ'. ಶಿಕ್ಷಣವು ಜನತೆಯ ಎಲ್ಲ ಸ್ತರಗಳನ್ನು ತಲುಪಿ ಅವರ ಜೀವನ ವಿಧಾನ ವಿಕಾಸದ ಒಂದು ಭಾಗವೆಂದಾಗಲಷ್ಟೇ ಶಿಕ್ಷಣಕ್ಕೆ ನಿಜವಾದ ಮಹತ್ವ ಸಿಗುತ್ತದೆ. ಪ್ರಜಾಪ್ರಭುತ್ವದಂತಹ ರಾಜಕೀಯ ಆಡಳಿತಾತ್ಮಕ ವ್ಯವಸ್ಥೆಗೆ ಶಿಕ್ಷಣವು ಮೂಲಭೂತ ತಳಪಾಯ ಹಾಕುತ್ತದೆಂಬುದರಲ್ಲಿ ಎರಡು ಮಾತಿಲ್ಲ. ಸ್ವಾತಂತ್ರ್ಯವು ನಿಜವಾದ ಅರ್ಥದಲ್ಲಿ ನ್ಯಾಯಯುತ ಸಾಮಾಜಿಕ ಸ್ವಾತಂತ್ರ್ಯವೇ ಹೊರತು ಕೇವಲ ರಾಜಕೀಯ ಸ್ವಾತಂತ್ರ್ಯವಲ್ಲ. ನ್ಯಾಯಸಮ್ಮತ ಸಾಮಾಜಿಕ ಸ್ವಾತಂತ್ರ್ಯದ ಮೊದಲ ಮೆಟ್ಟಿಲು ಶಿಕ್ಷಣ ಪ್ರಸಾರ.

### ಸಾಧಿಸಬೇಕಾದ ಗುರಿಗಳು

ಸಂಕೀರ್ಣವಾದ ಸಾಮಾಜಿಕ-ರಾಜಕೀಯ ಪರಿಸ್ಥಿತಿ ಭಾರತದಂತಹ ವೈವಿಧ್ಯಮಯ ಹಾಗೂ ಸ್ಥಿರೀಕೃತ ಸಮಾಜದಲ್ಲಿ ಸ್ವಾಭಾವಿಕ ಹಾಗೂ ಅನಿವಾರ್ಯ. ಸಮಾಜ ವಿಕಾಸಕ್ಕೆ ಪೂರಕವಾದ ರಾಜಕೀಯ ವ್ಯವಸ್ಥೆಯಿಂದಲಷ್ಟೇ ನಮ್ಮ ದೇಶದ ಅಭಿವೃದ್ಧಿ ಸಾಧ್ಯವೆಂಬುದನ್ನು ಹೊಸದಾಗಿ ಹೇಳಬೇಕಿಲ್ಲ. ಆ ದೃಷ್ಟಿಯಿಂದ ನೋಡಿದಾಗ ಕೆಲವು ಮಹತ್ವದ ಗುರಿಗಳ ಸಾಧನೆ ನಮ್ಮ ಸಾಮಾಜಿಕ ಅಭಿವೃದ್ಧಿಯ ವೇಗವರ್ಧಕವಾಗಬಲ್ಲದೆನಿಸುತ್ತದೆ. ಅಂಥ ಕೆಲವು ಪ್ರಮುಖ ಗುರಿಗಳನ್ನು ಸೂಕ್ಷ್ಮವಾಗಿ ಚಿತ್ರಿಸಬಹುದು.

ರಾಜಕೀಯ ವ್ಯವಸ್ಥೆಯ ಆದ್ಯ ಕರ್ತವ್ಯ ಸಮಾಜದ ಸರ್ವಾಂಗೀಣ ವಿಕಾಸ. ಸಾಮಾಜಿಕ-ಸಾಂಸ್ಕೃತಿಕ ಹಾಗೂ ಆರ್ಥಿಕ ಅಭಿವೃದ್ಧಿಯಿಂದಲಷ್ಟೇ ಇಂತಹ ಸಾಮುದಾಯಿಕ ವಿಕಾಸ ಸಾಧ್ಯ. ಸಾಮಾಜಿಕಾರ್ಥಿಕ ಅಭಿವೃದ್ಧಿಯ ಹಾದಿಯಲ್ಲಿ ರಾಷ್ಟ್ರವು ತಲುಪಬೇಕಾಗಿರುವ ಮಹತ್ವದ ಮೈಲಿಗಲ್ಲುಗಳೆಂದರೆ :

೧) ಬಡತನ ನಿರ್ಮೂಲನ, ಎಲ್ಲರಿಗೂ ಜೀವನಾವಶ್ಯಕತೆಗಳ ಪೂರೈಕೆ ಹಾಗೂ ಅಪವ್ಯಯದ ತಡೆ.

೨) ದೈಹಿಕ-ಮಾನಸಿಕ ನೋವಿನ ಶಮನ ಹಾಗೂ ಆರೋಗ್ಯ-ನೈರ್ಮಲ್ಯ ರಕ್ಷಣೆ.

೩) ಸಾಮಾಜಿಕ ಪಿಡುಗುಗಳಾದ ಜಾತಿ, ಲಿಂಗ, ವರ್ಗ, ಕೋಮು ತಾರತಮ್ಯಗಳ ವಿರುದ್ಧ ಸಮರ.

೪) ವ್ಯಕ್ತಿ ಸ್ವಾತಂತ್ರ್ಯದ ವಿಸ್ತರಣೆ, ಸಾಮಾಜಿಕ ಶಿಕ್ಷಣ ಮತ್ತು ವ್ಯಕ್ತಿತ್ವದ ಪೂರ್ಣ ವಿಕಸನಕ್ಕೆ ಸಹಾಯ.

೫) ನಿರುದ್ಯೋಗ ಸಮಸ್ಯೆಗೆ ಪರಿಹಾರ ಹಾಗೂ ಮಾನವ ಸಂಪನ್ಮೂಲಾಭಿವೃದ್ಧಿ.

ಈ ಎಲ್ಲ ಗುರಿಗಳನ್ನು ತಲುಪುವುದು ಅಸಾಧ್ಯದ ಮಾತೇನೂ ಅಲ್ಲವಾದರೂ ಸುಲಭದ ಮಾತಂತೂ ಅಲ್ಲ. ಇಂಥ ಗುರಿ ಸಾಧನೆಗೆ ರಾಜಕೀಯ ದೃಢಸಂಕಲ್ಪ ಬೇಕು. ಜೊತೆಗೆ ರಾಜಕೀಯ ವ್ಯವಸ್ಥೆಯು ಪೂರ್ಣವಾಗಿ 'ಸಾಮಾಜಿಕ ನ್ಯಾಯ'ದ ಹಿಡಿತದಲ್ಲಿರುವ ವ್ಯವಸ್ಥೆಯಾಗಿ ಮಾರ್ಪಡಬೇಕು. ಇಂಥ ವ್ಯವಸ್ಥೆಯ ಮುಖ್ಯ ಆಧಾರ ಸ್ತಂಭಗಳೆಂದರೆ,

೧) ಶೋಷಣಾರಹಿತ ರಾಜಕೀಯ ಕಾರ್ಯನಿರ್ವಹಣೆ.

೨) ಪ್ರಗತಿಪರ ಮೌಲ್ಯಗಳ ಕಾನೂನುಬದ್ಧ ರಕ್ಷಣೆ.

೩) ಭ್ರಷ್ಟಾಚಾರ ರಹಿತ ಆಡಳಿತ ವ್ಯವಸ್ಥೆ.





ಳ) ಕೌಟುಂಬಿಕ-ಸಾಮಾಜಿಕ ಪರಿಸರ ಭದ್ರತೆ ಹಾಗೂ ಸಕಾರಾತ್ಮಕ ಸಾಮಾಜೀಕರಣಕ್ಕೆ ಅನುವು.

ಱ) ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವ ಸಮಗ್ರವಾದ ಶೈಕ್ಷಣಿಕ ವ್ಯವಸ್ಥೆ.

ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ರಾಜಕೀಯ-ರಾಜನೀತಿಗಳನ್ನು ಅವುಗಳ ಗುರುತರವಾದ ಕಾರ್ಯಗಳನ್ನು ಅರ್ಥೈಸಿ, ಅಧ್ಯಯನ ಮಾಡುವುದು ಅತ್ಯಂತ ಅಗತ್ಯವಾಗಿದೆ. ವಿವಿಧ ರಂಗಗಳಲ್ಲಿ ಇಂದು ನಡೆಯುತ್ತಿರುವ ಮಹತ್ತರ ಬದಲಾವಣೆಗಳ ವಿಶ್ಲೇಷಣೆ ಇಂಥ ಅಧ್ಯಯನಗಳಿಂದಷ್ಟೇ ಸಾಧ್ಯ. ಈ ದಿಸೆಯಲ್ಲಿ ಪ್ರಮುಖ ಅಂಶಗಳಾದ ವ್ಯಕ್ತಿ-ಸಂಸ್ಥೆಗಳ ಸಂಪರ್ಕದ ಸ್ವರೂಪ, ಸಾಮೂಹಿಕ-ರಾಜಕೀಯ ವರ್ತನೆಯ ಗತಿಶೀಲತೆ, ಸಾಮಾಜಿಕ ಘಟಕಗಳ ವಿವರಣೆ, ವಿಮರ್ಶೆಗಳು ಅಭ್ಯಸಿಸಲ್ಪಡಬೇಕು. ಭಾರತದ ರಾಜಕೀಯ ಹಾಗೂ ಕುಟುಂಬ ವ್ಯವಸ್ಥೆಗಳ ನಡುವೆ ಇರಬಹುದಾದ ಸಂಬಂಧಗಳು ಜಾತಿಪದ್ಧತಿ, ಮಹಿಳೆಯರ ಸ್ಥಾನಮಾನ, ದಲಿತರು ಹಾಗೂ ಅಲ್ಪಸಂಖ್ಯಾತರ ಸಮಸ್ಯೆಗಳು, ಈ ಎಲ್ಲ ಅಂಶಗಳೂ ಭಾರತದ ಪ್ರಸ್ತುತ ರಾಜಕೀಯ ವಿಮರ್ಶೆಯಲ್ಲಿ ಗಮನಿಸಲೇಬೇಕಾದ ಅಂಶಗಳು. ನಮ್ಮ ದೇಶದ ಇಂದಿನ ಕೃಷಿ, ಕೃಷಿಯೇತರ ಉತ್ಪಾದನೆಗಳು, ವಿತರಣಾ ವ್ಯವಸ್ಥೆ, ಮಾರುಕಟ್ಟೆಯ ಸ್ವರೂಪಗಳು ರಾಜನೀತಿಯ ಅವಿಭಾಜ್ಯ ಅಂಗಗಳಾಗಿದ್ದು ಸಾಮಾಜಿಕ ಬದಲಾವಣೆಯ ಗತಿವಿಧಿಗಳನ್ನು ಗಂಭೀರರೂಪದಲ್ಲಿ ಪ್ರಭಾವಿಸುತ್ತವೆ. ಆದ್ದರಿಂದ ಇವೆಲ್ಲವುಗಳ ಅಧ್ಯಯನವೂ ಸಹ ಅತ್ಯಂತ ಪ್ರಸ್ತುತ.

**ಉಪಸಂಹಾರ**

ಜಾಗತಿಕ ಆಧುನೀಕರಣ ಪ್ರಕ್ರಿಯೆಯ ಜೀವಾಳವೇ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳ ರಚನಾತ್ಮಕ, ಕಾರ್ಯಾತ್ಮಕ ಬದಲಾವಣೆಗಳೆಂದು ಗುರುತಿಸಲಾಗಿದೆ. ಆ ದೃಷ್ಟಿಯಿಂದ ನೋಡಿದಾಗ ಭಾರತದ ರಾಜಕೀಯ ಮೌಲ್ಯಗಳು ಹಾಗೂ ಕಾರ್ಯಾತ್ಮಕ ಬದಲಾವಣೆಗಳು ಸಾಮಾಜಿಕ-ಆರ್ಥಿಕ ಮೌಲ್ಯಗಳಿಗೆ, ಕಾರ್ಯಗಳಿಗೆ ಸ್ಪಂದಿಸದಿದ್ದರೆ, ಅವುಗಳೊಂದಿಗೆ ಸಂವಾದಿಯಾಗದಿದ್ದರೆ, 'ನಿಯಮರಾಹಿತ್ಯ'ದ ಸಂದರ್ಭ ಸೃಷ್ಟಿಯಾಗಲೂ ಸಾಧ್ಯ. ನಮ್ಮ ಸಮಾಜದ ಸದ್ಯದ ಪರಿಸ್ಥಿತಿಯಲ್ಲಿ ಇದು ಗಮನಿಸಲೇಬೇಕಾದ ವಿಚಾರ. 'ತತ್ವನಿಷ್ಠ' ರಾಜಕೀಯ, 'ಮೌಲ್ಯನಿಷ್ಠ' ರಾಜಕೀಯ, 'ಗುರಿನಿಷ್ಠ' ರಾಜಕೀಯ ಮೊದಲಾದ ಪರಿಕಲ್ಪನೆಗಳು ಸಾಮಾಜಿಕ ತಳಹದಿಯಿಲ್ಲದಾಗ ಕೇವಲ ಜನಪ್ರಿಯ ಘೋಷಣೆಗಳಾಗಿ ಮಾರ್ಪಡುತ್ತವೆ. ಸಾಮಾನ್ಯರ ಹಾಗೂ ರಾಜಕೀಯ ಗಣ್ಯರ ನಡುವೆ ಇರಬೇಕಾದ ಭಾವನೆ-ವಿಚಾರಗಳ ಕೊಂಡಿ ಕಳಚಿಬಿದ್ದು 'ರಾಜನೀತಿ' ಎಂಬ ಶಬ್ದವು ಸಾಮಾನ್ಯ ಪ್ರಜೆಯ ದೃಷ್ಟಿಯಲ್ಲಿ ನಿಂದನೆಯ ಶಬ್ದವಾಗಿ ಬಳಸಲ್ಪಡುವುದು ಹೀಗೆ. ರಾಜಕೀಯ ಧುರೀಣರ ಯಶಸ್ಸು ಅವರ ಸಾಮಾಜಿಕ ಸಾಧನೆಗಳಿಂದ ಅಳೆಯಲ್ಪಡದೆ, ಅವರು ಗಳಿಸುವ ಸಂಪತ್ತು, ಅಧಿಕಾರ ಮತ್ತು ಮತಗಳ ರಾಶಿಯಿಂದ ಅಳೆಯಲ್ಪಡುವುದು ನಮ್ಮಂಥ ಅಭಿವೃದ್ಧಿಶೀಲ ರಾಷ್ಟ್ರಗಳ ದುರಂತವೆನಿಸುತ್ತದೆ. ಒಬ್ಬ ರಾಜಕೀಯಪಟು ರಾಜನೀತಿ ಕೌಶಲ್ಯ, ಸಂಪನ್ಮೂಲಗಳನ್ನು ಗರಿಷ್ಠ ಮಟ್ಟದಲ್ಲಿ ಹೊಂದಿರಬಹುದು. ಆದರೆ ಶುದ್ಧ ರಾಜಕೀಯಕ್ಕೆ ಅವಶ್ಯಕವಾದ ಮನಸ್ಸು ಮತ್ತು ಭಾವನಾಸ್ಥಿತಿಯನ್ನು ಹೊಂದಿಲ್ಲ ದಿದ್ದರೆ ಆತ ಅಭಿವೃದ್ಧಿಪೂರಕ ರಾಜಕಾರಣಿಯಾಗಲಾರ.

ಆಧುನಿಕ ಸಮಾಜದಂತೆಯೇ ಆಧುನಿಕ ರಾಜಕೀಯವೂ ಸಹ ತತ್ವಾದರ್ಶದ ನೆಲೆಯಲ್ಲಿ ಒಂದು ತೆರೆದ ತುದಿಯ (Open ended) ಪ್ರಕ್ರಿಯೆ. ಇಂದಿನ ಅಧಿಕಾರಶಾಹಿ ವ್ಯವಸ್ಥೆಯು ಈ ಮಾತನ್ನು ಗಮನದಲ್ಲಿಡಬೇಕು. ಪ್ರಾಮಾಣಿಕತೆ, ಅಭಿವೃದ್ಧಿಶೀಲತೆ, ಸರಳತೆ, ಸಜ್ಜನಿಕೆಗಳು ಕೇವಲ ನಿಘಂಟುಗಳಲ್ಲಿರುವ ಶಬ್ದಗಳಲ್ಲ; ಸಾಮುದಾಯಿಕ ಅಂತರ್‌ಕ್ರಿಯೆಗಳಲ್ಲಿ ಹೊರಹೊಮ್ಮಬೇಕಾದ ಅಂಶಗಳು. ''ತತ್ವಾದರ್ಶಗಳನ್ನು ಆಧರಿಸಿರುವ ರಾಜಕೀಯ''ವು ಸಮಾಜದ ಬೇಕು-ಬೇಡಗಳಿಗೆ ಸ್ಪಂದಿಸದಿದ್ದರೆ ಅದೆಂಥ ಅಭಿವೃದ್ಧಿ ಶೀಲ ಪ್ರಕ್ರಿಯೆಯಾದೀತು? ಇಂದು ದಿನನಿತ್ಯವೂ ನಾವು ಎದುರಿಸು ತ್ತಿರುವ ರಾಜಕೀಯ ಹಗರಣಗಳು, ಲಂಚದ ಪ್ರಕರಣಗಳು, ಕೋರ್ಟು-ಖಟ್ಲೆಗಳು ನಮ್ಮ ದೇಶದಲ್ಲಿ ರಾಜಕೀಯ ವ್ಯವಸ್ಥೆಯು ಅನುಭವಿಸುತ್ತಿರುವ ರೋಗದ ಲಕ್ಷಣಗಳು. ಈ ಸ್ಥಿತಿ ಬದಲಾಗದೇ ಈ ರೋಗ ಗುಣವಾಗದೇ ಸಾಮಾಜಿಕ ಅಭಿವೃದ್ಧಿ ಸಾಧ್ಯವಿಲ್ಲ.

ನಾವು ಸಾಧಿಸಬೇಕಾದ ಗುರಿಗಳ ವಿಚಾರವು ಈ ಹಿಂದೆ ಸೂಕ್ಷ್ಮವಾಗಿ ಪ್ರಸ್ತಾಪಿಸಲ್ಪಟ್ಟಿದೆ. ರಾಷ್ಟ್ರಮಟ್ಟದಲ್ಲಿ ಆ ಕುರಿತು ವ್ಯಾಪಕವಾದ ಚರ್ಚೆ ನಡೆಯುವುದು ಅಗತ್ಯ. ಬುದ್ಧಿಜೀವಿಗಳ ವಿಶ್ಲೇಷಣೆಗಳೊಂದಿಗೆ ಸಾಮಾನ್ಯರ ಪ್ರಾಯೋಗಿಕ ವಿಚಾರಗಳೂ ಬೆರೆತು ಅವು ನಮ್ಮ ರಾಜನೀತಿಯ ಮೂಲಭೂತ ತತ್ವಗಳಾಗಿ ಬಳಸಲ್ಪಡಬೇಕು. ಚುನಾವಣೆ ರಾಜಕೀಯದ ಅಂತಃಸತ್ವವಾಗಿ ಇರುವ ಇಂದಿನ ಪರಿಸ್ಥಿತಿ ಬದಲಾಗಿ ಜನಪ್ರಿಯ ಸರಕಾರ, ಜನಪ್ರಿಯ ರಾಜನೀತಿಗಳು ಸಮಾದ ಮನೋಧರ್ಮವನ್ನು ಇಡಿಯಾಗಿ ಬಿಂಬಿಸುವ ಸಾಧನಗಳಾಗಬೇಕು. ಹಾಗಾದಾಗಲಷ್ಟೇ ವ್ಯಕ್ತಿಯ ವಿಕಸನ ಸಾಧ್ಯ; ಸಾಮಾಜಿಕ ಅಭಿವೃದ್ಧಿ ಸಾಧ್ಯ. ☐

**ರಾಜಕೀಯ ಪ್ರವೇಶಿಸಲು ಏಕೆ ಈ ನೂಕು ನುಗ್ಗಲು?**
**ಹುಡುಕಿದರೆ ತಿಳಿದೀತು ಅದರ ಬೇರೊಂದು ಮಗ್ಗಲು!**
**- ಗೊ.ರು.ಚ.**







ಕರಿ ಘನ ಅಂಕುಶ ಕಿರಿದೆನ್ನಬಹುದೇ? ಬಾರದಯ್ಯಾ,
ಗಿರಿ ಘನ ವಜ್ರ ಕಿರಿದೆನ್ನಬಹುದೇ? ಬಾರದಯ್ಯಾ;
ತಮಂಧ ಘನ ಜ್ಯೋತಿ ಕಿರಿದೆನ್ನಬಹುದೇ? ಬಾರದಯ್ಯಾ,
ಮರಹು ಘನ ನಿಮ್ಮ ನೆನೆವ ಮನ ಕಿರಿದೆನ್ನಬಹುದೇ?
ಬಾರದಯ್ಯಾ, ಕೂಡಲ ಸಂಗಮದೇವಾ.

**- ಬಸವಣ್ಣ**

ಲಿಂಗವೆಂಬುದು ಕಾಯದ ತೊಡಕು ;
ಗುರುವೆಂಬುದು ಭಾವದ ತೊಡಕು ;
ಜಂಗಮವೆಂಬುದು ಮೂರರ ತೊಡಕು ;
ಜ್ಞಾನಮಯವೆಂಬುದು ಸರ್ವಮಯವೆಲ್ಲರ ತೊಡಕು.
ಒಂದ ಮೆಟ್ಟಿ ಒಂದ ಕಂಡು ಒಂದಕ್ಕೆ ಸಂದೇಹವಿಲ್ಲದೆ ನಿಂದುದು
ಹಿಂದಳ ಮುಂದಳದಂದುಗವಿಲ್ಲ ಎಂದನಂಬಿಗ ಚವುಡಯ್ಯ.

**- ಅಂಬಿಗರ ಚೌಡಯ್ಯ**

ಇಷ್ಟಲಿಂಗದಂಗ ಭಕ್ತಿಸ್ಥಲ, ಭಾವಲಿಂಗದಂಗ ಮಹೇಶ್ವರ ಸ್ಥಲ,
ಪ್ರಾಣಲಿಂಗದಂಗ ಪ್ರಸಾದಿಸ್ಥಳ, ಶರಣಸ್ಥಲದಂಗ ಐಕ್ಯಸ್ಥಲ,
ಐಕ್ಯಸ್ಥಲದಂಗ ಅಭೇದ್ಯಸ್ಥಲದಂಗ.
ಇಂತೀ ಉಭಯವಳಿದ ನಿರಂಗಂಗೆ ಸ್ಥಲ ಕುಳ ಲೇಪವಾಯಿತ್ತು
ನಿಃಕಳಂಕಮಲ್ಲಿಕಾರ್ಜುನಾ.

**- ಮೋಳಿಗೆಯ ಮಾರಯ್ಯ**

ಶೀಲವಂತನಾದಡೆ ಜಾತಿಯ ಬಿಡಬೇಕು
ಶಿವಜ್ಞಾನಿಯಾದಡೆ ಸಮಯವ ಬಿಡಬೇಕು
ಹೀಂಗಲ್ಲದೆ ಜಗದಲ್ಲಿ ನಡೆವ ಭ್ರಾಂತು ಸುದ್ದಿಯೇಕೆ
ನಿಭ್ರಾಂತನಾದ ಶರಣರಿಗೆ ಅಮುಗೇಶ್ವರಾ?

**-- ಅಮುಗೆ ರಾಯಮ್ಮ**

ದಾಕ್ಷಿಣ್ಯದ ಭಕ್ತಿ, ಕಲಿಕೆಯ ವಿರಕ್ತಿ, ಮಾತಿನ ಮಾಲೆಯ ಬೋಧೆ,
ತೂತಜ್ಞಾನಿಗಳ ಸಂಸರ್ಗ-ಭೀತ ಕುಂಭದಲ್ಲಿ ಅಮ-ತವ
ಹೊಯಿದಿರಿಸಲಿಕ್ಕೆ, ಅದು ಎಷ್ಟು ದಿವಸ ಇರಲಾಪುದು?
ಇಂತಿವ ಕಳೆದುಳಿದು ನಡೆನುಡಿ ಸಿದ್ಧಾಂತವಾಗಿ ಕೂಡಬೇಕು
ಸದ್ಯೋಜಾತ ಲಿಂಗವ.

**-- ರೇಕಣ್ಣ**

ಮರೆದವರ ಮನದಲ್ಲೆಲ್ಲವೂ ಮಾರಿ
ಅರಿದವರ ಮನದಲ್ಲೆಲ್ಲವೂ ಸ್ವಯಂಜ್ಯೋತಿ
ಡಕ್ಕೆಯ ದನಿ ಉಳ್ಳನ್ನಕ್ಕ ನಿಶ್ಚೈಸಿಕೊಳ್ಳಿ
ಕಾಲಾಂತಕ ಭೀಮೇಶ್ವರ ಲಿಂಗವನರಿವುದಕ್ಕೆ.

**-- ಡಕ್ಕೆಯ ಬೊಮ್ಮಣ್ಣ**

## ಶ್ರದ್ಧಾಂಜಲಿ

ಪ್ರಸಿದ್ಧ ಸಮಾಜ ಸೇವಾನಿಷ್ಠರೂ, ಶರಣ ಧರ್ಮೀಯರೂ ಆಗಿದ್ದ ಬೆಂಗಳೂರಿನ ಶ್ರೀ ಎಸ್. ಶ್ರೀಕಂಠಪ್ಪನವರು ದಿನಾಂಕ : ೧೦.೨.೨೦೦೦ರಂದು ಲಿಂಗೈಕ್ಯರಾದರು. ಶ್ರೀಯುತರು ನಗರದ ವೀರಶೈವ ಸಹಕಾರ ಬ್ಯಾಂಕ್, ಮಡಿವಾಳ ಮಾಚಿದೇವರ ಸಂಘ, ಮುದ್ರಕರ ಸಂಘ, ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ ಮೊದಲಾದ ಸಂಘಟನೆ ಗಳ ಅಧ್ಯಕ್ಷರಾಗಿ ಸ್ಮರಣೀಯ ಸೇವೆ ಸಲ್ಲಿಸಿದ್ದರು.

ಶರಣ ಸಾಹಿತ್ಯ ಪರಿಷತ್ತಿನ ಬಗೆಗೆ ಅಪಾರ ಅಭಿಮಾನ ಇಟ್ಟುಕೊಂಡಿದ್ದ ಶ್ರೀಕಂಠಪ್ಪನವರು ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳ ಪ್ರಚಾರಕ್ಕಾಗಿ ಪರಿಷತ್ತಿನಲ್ಲಿ ಹತ್ತು ಸಾವಿರ ರೂ.ಗಳ ಒಂದು ಸಾಹಿತ್ಯ ದತ್ತಿಯನ್ನು ಸ್ಥಾಪಿಸಿದ್ದರು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಲಿಂಗೈಕ್ಯ ಶ್ರೀಕಂಠಪ್ಪನವರಿಗೆ ತನ್ನ ಶ್ರದ್ಧಾಂಜಲಿ ಅರ್ಪಿಸುತ್ತದೆ.

**— ಸಂಪಾದಕರು**

## ಸುಭಾಷಿತಗಳು

ತಮ್ಮ ಯೋಗ್ಯತೆಯಿಂದ ಹೆಸರು ಗಳಿಸುವವರು ಶ್ರೇಷ್ಠರು. ತಂದೆಯಿಂದ ತಮ್ಮ ಕೀರ್ತಿಯನ್ನು ಮುಂದುಮಾಡುವವರು ಸಾಮಾನ್ಯರು. ತಮ್ಮ ಸೋದರಮಾವನ ಘನತೆಯಿಂದ ಜೀವಿಸುವವರು ಕೀಳು ಜನ.

**-- ಶಾರ್ಙ್ಗಧರ**

ಕಲ್ಯಾಣವನ್ನು ಬಯಸುವ ಮನುಷ್ಯನು ಈ ಆರು ದುರ್ಗುಣಗಳನ್ನು ತ್ಯಜಿಸಬೇಕು. ಅವು ಯಾವುವೆಂದರೆ; ಅತಿ ನಿದ್ರೆ, ಹೆದರಿಕೆ, ಸಿಟ್ಟು, ಆಲಸ್ಯ, ಎಚ್ಚರಿಗೇಡಿತನ, ಕೆಲಸವನ್ನು ಮುಂದೆ ಹಾಕುವುದು.

**-- ಮಹಾಭಾರತ**

ಕ್ಷಮಾಗುಣಕ್ಕೆ ಸರಿಯಾದ ತಪಸ್ಸಿಲ್ಲ, ಸಂತೋಷಕ್ಕೆ ಸರಿಯಾದ ತೃಪ್ತಿಯಿಲ್ಲ, ಆಸೆಯಂತಹ ಕಾಯಿಲೆ ಬೇರೊಂದಿಲ್ಲ, ದಯೆಯನ್ನು ಹೊರತುಪಡಿಸಿದ ಧರ್ಮವೇ ಇಲ್ಲ. ಹೀಗೆ ಮನುಷ್ಯನು ಕ್ಷಮಾಶೀಲನೂ, ಸಂತೃಪ್ತಜೀವಿಯೂ, ಅನಾಸಕ್ತನೂ, ದಯಾವಂತನೂ ಆದರೆ ಮಾತ್ರ ಆದರ್ಶಪ್ರಾಯನೆನಿಸುವ.

**-- ಸೂಕ್ತಿಮುಕ್ತಾವಳಿ**

# ಆಧುನಿಕ ವಚನಗಳು

ಆಸೆಗಾಗಿ ಭಾಷೆಯ ತೊರೆದವರುಂಟು.
ಸುಳ್ಳಿಗಾಗಿ ಸತ್ಯವ ತ್ಯಜಿಸಿದವರುಂಟು.
ಅಧಿಕಾರಕ್ಕಾಗಿ ಆದರ್ಶ ಬಿಟ್ಟವರುಂಟು.
ಸಂಪತ್ತಿಗಾಗಿ ಸದ್ಗುಣವ ಸಾಯಿಸಿದವರುಂಟು.
ಇಂಥವರ ಸಂಗ ಮುಖಭಂಗವೆಂದುಸುರಿ
ಬುದ್ಧ, ಬಸವ, ಗಾಂಧಿಯವರ ಪರಿಚಯಿಸಿದ
ಭಕ್ತಪ್ರಿಯ ಶ್ರೀ ಶಿವಕುಮಾರ ಪ್ರಭುವೇ
ನಿಮ್ಮಡಿಗಳಿಗೆ ನಮೋ ನಮೋ.

ಕುರುಡ ಕುಲಪತಿಯಾದಡೆ
ಚಾರಿತ್ರ್ಯಹೀನ ಮಂತ್ರಿಯಾದಡೆ
ಭ್ರಷ್ಟಾಚಾರಿ ಅಧಿಕಾರಿಯಾದೊಡೆ
ದುರಾಚಾರಿ ಗುರುವಾದೊಡೆ
ಗುಣಹೀನ ಗಂಡನಾದೊಡೆ
ಮತಿಹೀನ ಮಗನಾದೊಡೆ
ಲೋಕದುದ್ಧಾರವಿನ್ನೆಂತಹುದಯ್ಯಾ
ಭಕ್ತಪ್ರಿಯ ಶ್ರೀ ಶಿವಕುಮಾರ ಪ್ರಭುವೆ.

*– ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು*

ಬಸವ ಬಂದ ಭಕ್ತಿ ಬೆಳೆಯಿತು
ಬುದ್ಧ ಬಂದ ತ್ಯಾಗ ಬೆಳೆಯಿತು
ಮಹಾವೀರ ಬಂದ ಅಹಿಂಸೆ ಬೆಳೆಯಿತು
ಏಸು ಬಂದ ಕರುಣೆ ಬೆಳೆಯಿತು
ಅಕ್ಕ ಬಂದಳು ವೈರಾಗ್ಯ ಬೆಳೆಯಿತು
ಪ್ರಭುದೇವರು ಬಂದರು ಜಂಗಮ ತತ್ವ ಬೆಳೆಯಿತು
ಶ್ರೀ ಸಿದ್ಧಗುರುವೆ ನೀ ಬಂದೆ ನಾ ಬೆಳೆದೆ ....

*– ಮಡಿವಾಳ ದೇವರು*

ಕಾಯಕ್ಕೆ ಹಸಿವೆಂದು ಕಾದರಾದೀತೆ?
ನೀರು ನೆಳಲಿಲ್ಲೆಂದು ತಳುವಿದರೆ ತಡೆದೀತೆ?
ಮನದ ಬೇಸರ ಕಳೆದು ಮುಂದೆ ನಡೆದೇವೆಂದು
ಕುಳಿತರಾದೀತೆ?
ಜೀವನದ ಯಾತ್ರೆಯಲಿ ಕಾಯದಾಸೆಯನುಳಿಸಿ,
ಮನದ ಬಯಕೆಯನಳಿಸಿ ಭಕುತಿ ಭಾವವ ಸುಳಿಸಿ
ಶ್ರೀ ಮಲೆಯ ಮಹಾದೇವನ ನಿಲವನರಿಯಬೇಕು

– ಟಿ.ಎನ್. ಮಹಾದೇವಯ್ಯ

ಕಾಯಕ ಬೆಮರು ಗುರುಲಿಂಗಜಂಗಮಪೂಜೆ
ಶ್ರೀ ಕೈಲಾಸಗಂಗೆ
ಈ ಎಲ್ಲ ಮಾತುಗಳಿಗೂ ಈಗ ಒತ್ತು ಎನ್ನು
ಕೂಡಿನಲಿದಾಡಿ ಕೂಡಿ ಉಂಡರೂ
ಮಾತು ಮಾತಿಗೂ ಸಮಯ ಸಮಯಕೂ ಶ್ಯೂವಾಗಿ
ಎದೆಯ ಅಗಿಷ್ಟಿಕೆಯಲಿ
ಜಾತಿ ಬೆಂಕಿ ನಿಗಿನಿಗಿಯೇ ಇನ್ನು
ದಯೆ ಧರ್ಮವೆಲ್ಲ ಸೀದು ಕರಕಾಗಿರಲು
ಮಾನಸ ಸರೋವರದಲಿ ವಿಷದ ಎಸರು
ವಿಶ್ವಮಥಿಸಿದರೂ ಭೂಮಿಗೆ ಹಾಲಾಹಲದ ಮುಸುಕು
ಎಲ್ಲಿ ಹುಡುಕಿದರೆ ಸಿಕ್ಕಾನು ಶೂನ್ಯಸಿಂಹಾಸನದ ಪ್ರಭು ಬಸವಣ್ಣ

*– ಪ್ರೊ. ವಸಂತ ಕುಷ್ಟಗಿ*

ಧನ ಬಂದು ಗುಣ ಹೋಗಿ, ಐಸಿರಿ ಬಂದು ಗುರಿ ಹೋಗಿ
ಕಾಮದಿಂದ ಮದುವೆಯಾಗಿ
ಮರದಂತೆ ಉರುಳಿಹೋಗುವ ಬಾಳ್ವೆಗಾಗಿ
ಉತ್ತಮಗೊಳಿಸಿರೋ ಬದುಕ ಬಿಲ್ಲೇಶ ಪ್ರಭುವೆ

ಹೆಂಡತಿಯ ದುಡಿಮೆಯಲಿ, ಹೆಂಡ ಕುಡಿವ ಗಂಡರು
ಅವರ ಹಣಕ್ಕಾಗಿ ಪೀಡಿಸುವ
ಮಕ್ಕಳು ಭಂಡರು, ದಂಡ ಪಿಂಡಗಳಂತೆ
ಬಿಲ್ಲೇಶ ಪ್ರಭುವೆ

– ಜಿ.ವಿ. ನಾಗರತ್ನಮ್ಮ





**ಬಳ್ಳಾರಿ ಜಿಲ್ಲೆ**

# ಮನೆಯಲ್ಲಿ ಮಹಾಮನೆ




ವೇದಿಕೆಯಲ್ಲಿ ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತಿನ ಗೌರವಾಧ್ಯಕ್ಷರಾದ ಶ್ರೀ ಜಿ. ನಾಗಲಿಂಗಪ್ಪ, ಅಧ್ಯಕ್ಷ ಶ್ರೀ ರಾಜಶೇಖರ ಜಮದಂಡಿ, ಸಂಗೀತಗಾರರಾದ ಶ್ರೀ ರಾಜಗೋಪಾಲ ಭಾಗವತ್ ಹಾಗೂ ದುರ್ಗೇಶ್ ಮೊದಲಾದವರನ್ನು ಕಾಣಬಹುದು

''ಅಂದಿನ ಸಮಾಜದ ಪರಿವರ್ತನೆಗೆ ರಚಿತಗೊಂಡ ಶರಣರ ವಚನಗಳು ಇಂದಿಗೂ ದಾರಿದೀಪವಾಗಿವೆ'' ಎಂದು ವಿಜಯನಗರ ಕಾಲೇಜಿನ ಉಪನ್ಯಾಸಕರಾದ ಡಾ. ಮೃತ್ಯುಂಜಯ ರುಮಾಲೆ ಯವರು ನುಡಿದರು.

ಅವರು ದಿನಾಂಕ ೨೫.೦೨.೨೦೦೧ರಂದು ಬಳ್ಳಾರಿಜಿಲ್ಲೆ ಹೊಸಪೇಟೆ ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು ಗೌರವಾಧ್ಯಕ್ಷ ರಾದ ಶ್ರೀ ಜಿ. ನಾಗಲಿಂಗಪ್ಪ ಅವರ ಮನೆಯಲ್ಲಿ ಏರ್ಪಡಿಸಿದ್ದ ಪ್ರಥಮ 'ಮಹಾಮನೆ' ಕಾರ್ಯಕ್ರಮದಲ್ಲಿ ಮಾತನಾಡುತ್ತಿದ್ದರು. ''ಯಾರು ವರ್ತಮಾನದಲ್ಲಿ ಭವಿಷ್ಯತ್‌ನ್ನು ಆಲೋಚಿಸುತ್ತಾರೋ ಅವರು ಬದುಕಿರುತ್ತಾರೆ. ಯಾರು ವರ್ತಮಾನದಲ್ಲಿಯೇ ವರ್ತಮಾನವನ್ನು ಮರೆತಿರುತ್ತಾರೋ ಅವರು ಬದುಕಿದ್ದೂ ಸತ್ತಂತೆ'' ಎಂದು ಅವರು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಕನ್ನಡ ವಿಶ್ವವಿದ್ಯಾಲಯದ ಅಧ್ಯಾಪಕ ರಾದ ಡಾ. ಬಿ.ಎಂ. ಪುಟ್ಟಯ್ಯ ಅವರು ಮಾತನಾಡುತ್ತಾ, ''ಜ್ಞಾನವೇ ಕ್ರಿಯೆ. ಕ್ರಿಯೆಯೇ ಜ್ಞಾನ. ನಮ್ಮ ಅನುಭವಗಳೇ ನಮಗೆ 'ಗುರು'ವಾಗಿವೆ. ಮನುಷ್ಯ ಇಂದು ಅನೇಕ ಸುಳಿಗೆ ಸಿಲುಕಿ ಇತರೇ ಲಾಲಸೆಗೊಳಗಾಗಿದ್ದಾನೆ. ಇದಕ್ಕೆ ಪರಿಹಾರವಾಗಿ ಮಾನಸಿಕ ನೆಮ್ಮದಿ ಪಡೆಯಲು ಶರಣರ ವಚನಗಳ ವಿಶ್ಲೇಷಣೆ ಹಾಗೂ ಇಂತಹ ಕಾರ್ಯಕ್ರಮಗಳು ಅತ್ಯಂತ ಸೂಕ್ತವಾದವುಗಳು'' ಎಂದು ಕರೆ ನೀಡಿದರು.

ಇದೇ ಸಂದರ್ಭದಲ್ಲಿ ಶ್ರೀಮತಿ ಪುಷ್ಪಲತಾ, ಎ. ಕರುಣಾನಿಧಿ, ಎಂ. ರವೀಕಾಂತ ಹಾಗೂ ವೀರೇಂದ್ರ, ಅವರಿಂದ ವಚನಗಾಯನ ನಡೆಯಿತು.

ಆರಂಭದಲ್ಲಿ ಶ್ರೀ ದಾರುಕಾಚಾರ್ಯರವರು ಸ್ವಾಗತಿಸಿದರು. ಉಪಾಧ್ಯಕ್ಷರಾದ ಶ್ರೀ ಜಿ. ಬಸಪ್ಪನವರು ಪ್ರಾಸ್ತಾವಿಕವಾಗಿ ಮಾತಾಡಿ 'ಮಹಾಮನೆ'ಯ ಧ್ಯೇಯೋದ್ದೇಶಗಳ ಬಗೆಗೆ ತಿಳಿಸಿದರು. ಕೊನೆಯಲ್ಲಿ ಶ್ರೀ ಜಿ. ನಾಗಲಿಂಗಪ್ಪನವರು ವಂದಿಸಿದರು.

ವರದಿ : ರಾಜಶೇಖರ, ಜಮದಂಡಿ

**ಬೆಳಗಾವಿ ಜಿಲ್ಲೆ**

# ‘ಮರಣವೇ ಮಹಾನವಮಿ’ – ಚಿಂತನ ಸಂಕಿರಣ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಬೆಳಗಾವಿ ಜಿಲ್ಲಾ ಘಟಕವು ಬೆಂಗಳೂರಿನ ‘ಲಿವ್‌ವೆಲ್ – ಲೀವ್‌ವೆಲ್’ ಸೊಸೈಟಿ, ಬೆಳಗಾವಿಯ ಹಿರಿಯ ನಾಗರಿಕರ ವೇದಿಕೆ ಮತ್ತು ಬೆಳಗಾವಿಯ ಕನ್ನಡ ಸಾಹಿತ್ಯ ಭವನ ವಿಶ್ವಸ್ಥ ಮಂಡಳಿ ಇವುಗಳ ಸಹಯೋಗದಲ್ಲಿ ‘ಮರಣವೇ ಮಹಾನವಮಿ’ ಕುರಿತ ವಿಶೇಷ ಚಿಂತನ ಸಂಕಿರಣವನ್ನು ೧೮, ಮಾರ್ಚ ೨೦೦೧ರಂದು ಬೆಳಗಾವಿಯ ಕನ್ನಡ ಸಾಹಿತ್ಯ ಭವನದಲ್ಲಿ ಏರ್ಪಡಿಸಿತ್ತು.

ಸಾನ್ನಿಧ್ಯವನ್ನು ವಹಿಸಿದ್ದ ಬೆಳಗಾವಿ ಶ್ರೀ ನಾಗನೂರು ರುದ್ರಾಕ್ಷಿ ಮಠದ ಪೂಜ್ಯ ಶ್ರೀ ಸಿದ್ಧರಾಮಮಹಾಸ್ವಾಮಿಗಳು ಜ್ಯೋತಿ ಹಚ್ಚುವ ಮೂಲಕ ಸಂಕಿರಣವನ್ನು ಉದ್ಘಾಟಿಸಿದರು.

ಹುಟ್ಟು ಆಕಸ್ಮಿಕವಾದರೂ ಸಾವು ಮಾತ್ರ ನಿಶ್ಚಿತವಾದದ್ದು, ಸಾವು ಅನಿವಾರ್ಯ ಹಾಗೂ ಬೆನ್ನಿಗಂಟಿಕೊಂಡೇ ಬರುತ್ತದೆ. ಆದ್ದರಿಂದ ಮರಣಕ್ಕೆ ಶೋಕಿಸುವುದು ಸಲ್ಲದು'' ಎಂದು ಅಧ್ಯಕ್ಷತೆ ವಹಿಸಿದ್ದ ಬೆಳಗಾವಿ ಹಿರಿಯ ನಾಗರಿಕ ವೇದಿಕೆಯ ಅಧ್ಯಕ್ಷರಾದ ಶ್ರೀ ಜಿನದತ್ತ ದೇವಾಯಿ ಅವರು ತಿಳಿಸಿದರು.

**ಹುಟ್ಟು – ಸಾವು**

ಸಂಕಿರಣದ ಮೊದಲ. ಗೋಷ್ಠಿಯಲ್ಲಿ ಸಾಮಾಜಿಕ ದೃಷ್ಟಿಯಲ್ಲಿ ಹುಟ್ಟು-ಸಾವು ಎಂಬ ವಿಷಯದ ಬಗ್ಗೆ ಬೆಂಗಳೂರು ವಿಶ್ವವಿದ್ಯಾಲಯದ ಸಮಾಜಶಾಸ್ತ್ರ ವಿಭಾಗದ ಪ್ರೊ|| ಆರ್. ವೆಂಕಟಸುಬ್ಬಯ್ಯನವರು ಮಾತನಾಡಿದರು. ಡಾ|| ಎಸ್.ಪಿ. ಪಾಟೀಲ, ಜೈನ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಅವರು ಕಳುಹಿಸಿದ್ದ ''ಸಲ್ಲೇಖನ ವ್ರತ'' ಎಂಬ ಪ್ರಬಂಧವನ್ನು ಪ್ರೊ|| ಪಾಟೀಲ ಅವರು ಓದಿದರು.

ಎರಡನೆಯ ಗೋಷ್ಠಿಯಲ್ಲಿ ಕಾನೂನು ದೃಷ್ಟಿಯಲ್ಲಿ ಇಚ್ಛಾ ಮರಣದ ಬಗ್ಗೆ ಪ್ರೊ|| ವಿ.ಎಸ್. ಜೋಶಿ ಅವರು ಮಾತನಾಡಿ, ಕೆಲವು ದೃಷ್ಟಾಂತಗಳೊಂದಿಗೆ ವಿವರಿಸಿ, ವ್ಯಕ್ತಿಗೆ ''ಜೀವಿಸುವುದು ವೈಯಕ್ತಿಕ ಹಕ್ಕಾಗಿರುವಂತೆಯೇ ಇಚ್ಛಾಮರಣವೂ ಸಹ ಅವನ ಹಕ್ಕು'' ಎಂದು ತಿಳಿಸಿದರು.

ಹುಬ್ಬಳ್ಳಿ ಕೆ.ಎಂ.ಸಿ. ಆಸ್ಪತ್ರೆಯ ವೈದ್ಯ ಡಾ. ಎಂ.ಸಿ. ಚಂದ್ರು ದೇಹದಾನ ಕುರಿತು ಅದರ ಮಹತ್ವವನ್ನು ವಿವರಿಸಿದರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಪರಿಷತ್ತಿನ ಬೆಳಗಾವಿ ಜಿಲ್ಲಾ ಘಟಕದ ಅಧ್ಯಕ್ಷ ಡಾ|| ಎಫ್.ವಿ. ಮಾನ್ವಿ ಅವರು ವಹಿಸಿದ್ದರು. ಪೂಜ್ಯ ಶ್ರೀ ಸಿದ್ದರಾಮ ಸ್ವಾಮೀಜಿಯವರ ಸಾನ್ನಿಧ್ಯದಲ್ಲಿ ಬೆಂಗಳೂರಿನ ‘ಲಿವ್‌ವೆಲ್ - ಲೀವ್‌ವೆಲ್’ ಪತ್ರಿಕೆಯ ಸಂಪಾದಕರಾದ ಶ್ರೀ ಎ.ಎಸ್. ರಾವತ್ ಅವರು ಸಮಾರೋಪ ಭಾಷಣಮಾಡಿ ಇಂತಹ ಸಂಕಿರಣಗಳ ಉಪಯುಕ್ತತೆಯ ಬಗ್ಗೆ ತಿಳಿಸಿದರು.



ಡಾ || ಎಂ.ಸಿ. ಚಂದ್ರು ಅವರು ಮಾತನಾಡುತ್ತಿರುವುದು



ಶ್ರೀ ರಾವತ್ ಅವರಿಂದ ಸಮಾರೋಪ ಭಾಷಣ







ಸಭಿಕರು

ಸಾನ್ನಿಧ್ಯ ವಹಿಸಿದ್ದ ಪೂಜ್ಯ ನಾಗನೂರು ಶ್ರೀಗಳು ''ಹಿಂದಿನದು ಸತ್ತು ಹೋಗಿದೆ. ಮುಂದೆ ಬರುವುದು ನಿಶ್ಚಿತವಿಲ್ಲ, ಇಂದಿನದು ಮಾತ್ರ ನಿಶ್ಚಿತ, ಹುಟ್ಟು ಆಕಸ್ಮಿಕ, ಸಾವು ನಿಶ್ಚಿತ. ಸಾವು ಎಂಬ ಶಬ್ದ ಉಚ್ಚರಿಸಲು ಕೆಲವರು ಹೆದರುತ್ತಾರೆ. ಹೆದರಿದರೂ ಹೆದರದಿದ್ದರೂ ಸಾವು ನಮ್ಮನ್ನು ಕೊಂಡೊಯ್ಯುವುದು ಸತ್ಯ. ಅದನ್ನು ಸಂತೋಷದಿಂದ ಸ್ವಾಗತಿಸಬೇಕು. ಅದನ್ನೇ ಶರಣರು ನಾಳೆ ಒಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗಿಂದೇ ಬರಲಿ. ''ಜಾತಸ್ಯ ಮರಣಂ ಧ್ರುವಂ'' ಎಂಬುದಾಗಿ ಹೇಳಿದ್ದಾರೆ'' ಎಂದು ತಿಳಿಸಿದರು.

ಸಮಾರೋಪ ಸಮಾರಂಭದಲ್ಲಿ ಮಾತನಾಡುತ್ತಾ, ಶ್ರೀ ಗೊ.ರು.ಚ. ಅವರ ಪ್ರಾಸ್ತಾವಿಕ ಭಾಷಣದ ವಿಚಾರಗಳು ಉತ್ತಮ ಅಡಿಪಾಯ ಹಾಕಿದ್ದು, ಉತ್ತಮ ವಿಷಯಗಳು ಮಂಡಿತ ವಾಗಿ ಸಂಕಿರಣ ಒಟ್ಟಿನಲ್ಲಿ ಸಾರ್ಥಕತೆ ಪಡೆದಿದೆ'' ಎಂದು ಪೂಜ್ಯರು ಅಭಿಪ್ರಾಯಪಟ್ಟರು.

ಪ್ರಾಸ್ತಾವಿಕ ಭಾಷಣ ಮಾಡಬೇಕಾಗಿದ್ದ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಗೊ.ರು.ಚ. ಅವರು ಅಸ್ವಸ್ಥತೆಯಿಂದ ಬರಲಾಗಲಿಲ್ಲ. ಅವರು ಬರೆದು ಕಳುಹಿಸಿದ ಪ್ರಾಸ್ತಾವಿಕ ಭಾಷಣವನ್ನು ಪರಿಷತ್ತಿನ ಕಾರ್ಯದರ್ಶಿ ಶ್ರೀ ಜಿ.ಪಿ. ಚಿಕ್ಕರಿಯಪ್ಪ ಅವರು ಓದಿದರು.

ಶ್ರೀ ಪಾರ್ಶ್ವನಾಥ ಉಪಾಧ್ಯ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಹಿರಿಯ ನಾಗರಿಕ ವೇದಿಕೆಯ ಕಾರ್ಯದರ್ಶಿ ಶ್ರೀ ಎಸ್.ಬಿ. ಚಿಮ್ಮಡ ಅವರು ಎಲ್ಲರನ್ನು ಸ್ವಾಗತಿಸಿದರು. ಕನ್ನಡ ಭವನ ವಿಶ್ವಸ್ಥ ಮಂಡಳಿ ಕಾರ್ಯದರ್ಶಿ ಶ್ರೀ ವಿ.ಸಿ. ಮಾಲಗತ್ತಿಯವರು ಸಂಕಿರಣದ ಹಿನ್ನೆಲೆಯನ್ನು ವಿವರಿಸಿ ದರು. ಲಿವ್‌ವೆಲ್- ಲೀವ್‌ವೆಲ್ ಸೊಸೈಟಿಯ ಕಾರ್ಯದರ್ಶಿ ಶ್ರೀ ವಿ.ಎಸ್. ಕೃಷ್ಣನ್ ಬೆಂಗಳೂರಿನ ಸದಸ್ಯರೊಡನೆ ಬಂದು ಸಭೆಯಲ್ಲಿ ಹಾಜರಿದ್ದರು. ಬೆಳಗಾವಿ ಜಿಲ್ಲಾ ಘಟಕದ ಕಾರ್ಯದರ್ಶಿ ಡಾ || ಬಸವರಾಜ ಜಗಜಂಪಿ ಕಾರ್ಯಕ್ರಮವನ್ನು ನಿರ್ವಹಿಸಿದರು.

ವರದಿ : ವೀಣಾ ಡಿ. ಕೊಳ್ಳಿ, ಬೈಲಹೊಂಗಲ

**ಬೆಂಗಳೂರು ನಗರ**

# ಸಂಗೀತ ಶಿವರಾತ್ರಿ

ಅಖಿಲ ಭಾರತ ಶರಣಸಾಹಿತ್ಯ ಪರಿಷತ್ತು ದಿನಾಂಕ ೨೧-೨-೨೦೦೧ರ ಮಹಾಶಿವರಾತ್ರಿಯಂದು ರಾತ್ರಿ ೮ರಿಂದ ಇಡೀ ರಾತ್ರಿ ‘ಸಂಗೀತ ಶಿವರಾತ್ರಿ’ ಕಾರ್ಯಕ್ರಮವನ್ನು ಏರ್ಪಡಿಸಿತ್ತು. ಹೆಸರಾಂತ ಕಲಾವಿದರಾದ ರವೀಂದ್ರನಾಥ ಹಂದಿಗನೂರು, ವಿ.ಯಂ ನಾಗರಾಜ್, ರಘುಪತಿ ಹೆಗಡೆ, ಎಂ.ಆರ್. ರಾಜಶೇಖರ್, ಅನಂತ ಭಾಗವತರ್, ರಮೇಶ್ ಕುಲಕರ್ಣಿ, ದತ್ತಕುಮಾರ್ ಮತ್ತು ಸಂಗಡಿಗರು, ನಾಗಲಿಂಗಯ್ಯ ವಸ್ತ್ರದಮಠ ಹಾಗೂ ವೀಣಾ ಶಾಂತೇಶ್, ಸುನಂದ ಚನ್ನಬಸವಣ್ಣ, ಮಾಧವೀ ಉಮೇಶ್, ಬೀನಾ ಬಾದಾಮಿ, ನೇತ್ರ ಎಸ್. ನಾಥ್ ಮತ್ತು ಕು || ಎಸ್.ಪಿ. ಶೃತಿ ಮತ್ತು ವಿದ್ಯಾ ಎಸ್. ಮೂರ್ತಿ ಮುಂತಾದವರು ಭಾಗವಹಿಸಿದ್ದರು. ವಾದ್ಯಗೋಷ್ಠಿಯಲ್ಲಿ ವೀರಪ್ಪಬಡಿಗೇರ, ಉಮಾಕಾಂತ ಪುರಾಣಿಕ, ಬಿ.ವಿ. ರಾಧಾಕೃಷ್ಣ, ಎಂ. ನಾಗೇಶ್, ರಾಜೂ ಕುಲಕರ್ಣಿ, ಗುರುಸಂಗಪ್ಪ ಹೂಗಾರ, ಡಿ.ಎಸ್. ಹೂಗಾರ, ಹನುಮಂತ ಹೂಗಾರ ಮತ್ತು ಹನುಮಂತಕುಮಾರ ಗತ್ತರಗಿ ಅವರು ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು.

ಪರಿಷತ್ತು, ದಿಬ್ಬೂರು ವೀರಪ್ಪ ನಂಜಮ್ಮ ಎಂಡೋಮೆಂಟ್ ಟ್ರಸ್ಟ್, ಭಾರತ ಯಾತ್ರಾ ಕೇಂದ್ರ ಮತ್ತು ಶ್ರೀ ವಿನಾಯಕ ಸೇವಾ ಸಮಿತಿಯವರ ಸಹಯೋಗದೊಂದಿಗೆ ಆಯೋಜಿಸಲಾಗಿದ್ದ ಈ ಕಾರ್ಯಕ್ರಮ ಅಪಾರ ಶ್ರೋತೃಗಳ ಮೆಚ್ಚುಗೆ ಗಳಿಸಿತು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್‌ನ ಮೂರನೇ ವರ್ಷದ ‘ಸಂಗೀತ ಶಿವರಾತ್ರಿ’ ಕಾರ್ಯಕ್ರಮ ಇದಾಗಿದ್ದು, ರವೀಂದ್ರನಾಥ ಹಂದಿಗನೂರ ಮತ್ತು ಕು || ಎಸ್.ಪಿ. ಶೃತಿಯವರ ಘಝಲ್ ಕಾರ್ಯಕ್ರಮ ಈ ಸಲದ ವಿಶೇಷವಾಗಿತ್ತು. ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಶ್ರೀ ದಿಬ್ಬೂರು ಸಿದ್ಧಲಿಂಗಪ್ಪ ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಪರಿಷತ್ತಿನ ಕಾರ್ಯದರ್ಶಿ ಶ್ರೀ ಜಿ.ಪಿ. ಚಿಕ್ಕರಿಯಪ್ಪ ಸ್ವಾಗತಿಸಿದರು. ಶ್ರೀ ಸಿ. ವಸಂತರಾಜು ಕಾರ್ಯಕ್ರಮ ವನ್ನು ನಿರೂಪಿಸಿದರು.

ವರದಿ : ಮರುಳಪ್ಪ

## ಬಿಜಾಪುರ ಜಿಲ್ಲೆ

## ದತ್ತಿ ಉಪನ್ಯಾಸ – ಗ್ರಂಥಬಿಡುಗಡೆ – ಸನ್ಮಾನ



ಪರಮಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳವರಿಂದ ಆಶೀರ್ವಚನ. ಚಿತ್ರದಲ್ಲಿ ಡಾ॥ ಮಲ್ಲಿಕಾರ್ಜುನ ಮೇತ್ರಿ, ಶ್ರೀ ಬಸವಣ್ಣ ಹಂಪನಗೌಡ್ರ, ಡಾ॥ ಎಸ್.ಪಿ. ಪಾಟೀಲ, ಶ್ರೀ ಡಿ.ಎಸ್. ಪಾಟೀಲ, ಡಾ॥ ಕಂಡ್ಲಿಮಟ್ಟಿ ಅವರನ್ನು ಕಾಣಬಹುದು.

ಫೆಬ್ರವರಿ ೨೩, ೨೦೦೧ ರಂದು ಬಿಜಾಪುರದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ದತ್ತಿ ಉಪನ್ಯಾಸ, ಗ್ರಂಥ ಬಿಡುಗಡೆ ಮತ್ತು ಸನ್ಮಾನ ಸಮಾರಂಭಗಳು ಪೂಜ್ಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆದವು.

ಪೂಜ್ಯರು ಆಶೀರ್ವಚನ ನೀಡುತ್ತ ''ಮನುಷ್ಯ ದಿನನಿತ್ಯ ಸಾಧನೆ ಮಾಡುತ್ತಲೇ ಇರಬೇಕು. ಸಾಧನೆ ಹಾಗೆಯೇ ಬೆಳೆಯುತ್ತ ಸಾಗುತ್ತದೆ. ಈ ವೇಳೆಯಲ್ಲಿ ಫಲಕ್ಕೆ ನಿರೀಕ್ಷೆ ಬೇಡ. ಅದು ಒಮ್ಮೆಲೆ ಸಿಗಲಾರದು. ಹಂತ ಹಂತವಾಗಿ ಬೆಳೆಯುತ್ತ ಸಾಗಿದಂತೆ ನಾವು ಫಲ ಪಡೆಯುತ್ತೇವೆ'' ಎಂದರು.

ಸುತ್ತೂರು ಜಗದ್ಗುರು ಶ್ರೀ ಕೂಗಲೂರು ನಂಜುಂಡ ದೇಶಿಕೇಂದ್ರ ಮಹಾಸ್ವಾಮಿಗಳ ದತ್ತಿ ಉಪನ್ಯಾಸ ನೀಡಿದ ಪ್ರೊ॥ ಬಿ. ಜಗದೀಶ ಅವರು ''ಶರಣರ ಕಾಯಕ ಸಿದ್ಧಾಂತ ಜಾಗತಿಕ ಕೊಡುಗೆ. ಶರಣರು ಇದನ್ನು ಜಾತಿಯಿಂದ ಬೇರ್ಪಡಿಸಿ ಶ್ರೇಷ್ಠಸ್ಥಾನ ವನ್ನು ಒದಗಿಸಿದರು. ಯಾವ ಕಾಯಕವೂ ಪವಿತ್ರವೇ'' ಎಂದು ತಿಳಿಸಿದರು.

ಇದೇ ಸಂದರ್ಭದಲ್ಲಿ ಡಾ॥ ಎಸ್.ಬಿ. ಪಾಟೀಲರ 'ಜೀವನ ವಿಕಾಸ' ಕೃತಿಯನ್ನು ಶ್ರೀ ಸಿದ್ಧೇಶ್ವರ ಮಹಾ ಸ್ವಾಮಿಗಳು ಬಿಡುಗಡೆ ಮಾಡಿದರು. ಈ ಕೃತಿಯನ್ನು ಕುರಿತು ಡಾ॥ ಎಸ್.ಎಸ್. ಕಡ್ಲಿಮಟ್ಟಿ ಮಾತನಾಡಿದರು.

ಕುಮಾರಿ ರಶ್ಮಿ ಪಾಟೀಲ ಅವರ ವಚನಗೀತೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಡಿ.ಎಸ್. ಪಾಟೀಲ ಅವರು ಸರ್ವರನ್ನೂ ಸ್ವಾಗತಿಸಿ, ಪರಿಷತ್ತಿನ ಚಟುವಟಿಗೆಗಳನ್ನು ಕುರಿತು ಪ್ರಾಸ್ತಾವಿಕವಾಗಿ ಮಾತನಾಡಿದರು.

ಶರಣ ಜೀವನ ನಡೆಸುತ್ತ ವಚನ ವಿಶ್ಲೇಷಣೆ ಮಾಡುವುದರ ಮೂಲಕ ಮನೆ-ಮನೆಗೂ ಶರಣರ ವಚನಗಳ ತಿರುಳನ್ನು ಪಸರಿಸಿದ ಶ್ರೀ ಬಸವಣ್ಣ ಹಂಪನಗೌಡ್ರ ಅವರನ್ನು ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು ಶರಣ ಸಾಹಿತ್ಯ ಪರಿಷತ್ತಿನ ಪರವಾಗಿ ಸನ್ಮಾನಿಸಿದರು. ಬಸವಣ್ಣ ಹಂಪನಗೌಡ್ರ ಕುರಿತು ಡಾ॥ ಎಸ್.ಎಸ್. ನರಸಣಗಿ ಅವರು ಮಾತನಾಡಿದರು.

ಡಾ॥ ಮಲ್ಲಿಕಾರ್ಜುನ ಮೇತ್ರಿ ಅವರು ಕಾರ್ಯಕ್ರಮ ನಿರೂಪಿಸಿದರು. ಎಸ್.ಟಿ. ಜೇವೂರ ವಂದಿಸಿದರು. ಗಣ್ಯರಾದ ಶಂ.ಗು. ಬಿರಾದಾರ, ಈಶ್ವರಚಂದ್ರ ಚಿಂತಾಮಣಿ, ಸಿಸು ಸಂಗಮೇಶ, ಡಾ॥ ವಸಂತ ಕುಲಕರ್ಣಿ, ಶ್ರೀಶೈಲ ಜೇಗೂರ, ಜಿ.ಆರ್. ಔರಸಂಗ, ಡಾ॥ ಆರ್.ಸಿ. ಮುದ್ದೇಬಿಹಾಳ, ಡಾ॥ ಎಂ.ಎನ್. ವಾಲಿ, ಮಹಾಂತ ಗುಲಗಂಜಿ, ಡಾ॥ ಬಾಬಾಗೌಡ ಪಾಟೀಲ, ಬಿ.ಎಚ್. ಬಗಲಿ, ಹಣಮಶೆಟ್ಟಿ ಮುಂತಾದ ಗಣ್ಯರು ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ವರದಿ : ಡಿ.ಎಸ್. ಪಾಟೀಲ





## ಮೈಸೂರು ಜಿಲ್ಲೆ

## ಶರಣರ ಬದುಕು ಮತ್ತು ಸಂದೇಶ ಕುರಿತ ''ರಸಪ್ರಶ್ನೆ'' ಕಾರ್ಯಕ್ರಮ

ಜನವರಿ ೨೦, ೨೦೦೧ ರಂದು ಮೈಸೂರಿನ ಜೆ.ಎಸ್.ಎಸ್. ಅಂಗವಿಕಲರ ಪಾಲಿಟೆಕ್ನಿಕ್ ಮತ್ತು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು ನಗರ ಘಟಕ ಇವರ ಸಂಯುಕ್ತ ಆಶ್ರಯದಲ್ಲಿ ಶರಣರ ಬದುಕು ಮತ್ತು ಸಂದೇಶ ಕುರಿತು ರಸಪ್ರಶ್ನೆ ಕಾರ್ಯಕ್ರವನ್ನು ಹಮ್ಮಿಕೊಳ್ಳಲಾಗಿತ್ತು.

ಪ್ರಾಸ್ತಾವಿಕ ನುಡಿಯನ್ನಾಡಿದ ಮಹಾರಾಜ ಕಾಲೇಜಿನ ಪ್ರಾಧ್ಯಾಪಕ ಡಾ. ಎಸ್. ಶಿವರಾಜಪ್ಪನವರು ಶರಣರ ಬದುಕು ಮತ್ತು ಸಂದೇಶಗಳು ವಿದ್ಯಾರ್ಥಿಗಳ ಜೀವನಕ್ಕೆ



ಶ್ರೀ ಗೊ.ರು. ಪರಮೇಶ್ವರಪ್ಪನವರಿಂದ ಕಾರ್ಯಕ್ರಮ ಉದ್ಘಾಟನೆ

ಜ್ಞಾನದೀವಿಗೆಯಾಗಲಿ, ಪರಿಷತ್ತಿನ ಇಂತಹ ಕಾರ್ಯಗಳಿಗೆ ಯುವಜನತೆ ಸ್ಪಂದಿಸುವಂತಾಗಲಿ ಎಂದರು.

ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಬಿ.ಎಸ್. ಬಸವರಾಜಯ್ಯನವರು ರಸಪ್ರಶ್ನೆ ಕಾರ್ಯಕ್ರಮವನ್ನು ಉದ್ಘಾಟಿಸಿ ''ಶರಣರ ಬದುಕು ಮತ್ತು ಸಂದೇಶಗಳನ್ನು ಯುವಜನಾಂಗಕ್ಕೆ ತಲುಪಿಸುವಂತಾಗಬೇಕೆಂದು'' ಹೇಳಿದರು.

ಮೈಸೂರು ನಗರ ಘಟಕದ ಅಧ್ಯಕ್ಷರಾದ ಶ್ರೀ ಗೊ.ರು. ಪರಮೇಶ್ವರಪ್ಪನವರು ಅಧ್ಯಕ್ಷತೆ ವಹಿಸಿ ಪರಿಷತ್ತಿನ ಉದ್ದೇಶ, ಶರಣರ ಮೌಲಿಕ ಸಂದೇಶಗಳನ್ನು ವಿದ್ಯಾರ್ಥಿಗಳಿಗೆ ತಲುಪಿ ಅವರ ಬದುಕು ಸುಗಮವಾಗಿ, ನೈತಿಕಸ್ಥೈರ್ಯ ಪಡೆದು ಬದುಕಲಿ ಎಂದು ಹಾರೈಸುತ್ತಾ ಇಂಥ ರಸಪ್ರಶ್ನೆ ಕಾರ್ಯಕ್ರಮಗಳಿಂದ ವಿದ್ಯಾರ್ಥಿ ಸಮುದಾಯ ಉತ್ತಮಗೊಳ್ಳುತ್ತದೆ ಎಂಬ ಆಶಯ ವನ್ನು ವ್ಯಕ್ತಪಡಿಸಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಬಾಹುಬಲಿ ಪಾಲಿಟೆಕ್ನಿಕ್‌ನ ಪ್ರಾಂಶುಪಾಲರಾದ ಪ್ರೊ. ವೀರಭದ್ರಪ್ಪನವರು ''ಕಲುಷಿತ ಸಮಾಜಕ್ಕೆ ಶರಣರ ಜೀವನ ಸಂದೇಶ ಆದರ್ಶವಾಗಬೇಕಾಗಿದೆ'' ಎಂದರು.



ಶ್ರೀಮತಿ ರಾಧಾ ನೀಲಕಂಠ ಅವರಿಂದ ರಸಪ್ರಶ್ನೆ ಕಾರ್ಯಕ್ರಮ

ಪ್ರಾರ್ಥನೆಯನ್ನು ಕುಮಾರು ರಾಧಾ ನಡೆಸಿದರು. ಸ್ವಾಗತವನ್ನು ವಾಣಿಜ್ಯ ವಿಭಾಗದ ಮುಖ್ಯಸ್ಥರಾದ ಪ್ರೊ. ನಂಜುಂಡಸ್ವಾಮಿಯವರು ಮಾಡಿದರು. ವಂದನಾರ್ಪಣೆಯನ್ನು ಗಣಕ ವಿಭಾಗದ ಉಪನ್ಯಾಸಕರಾದ ಶ್ರೀಕಂಠಸ್ವಾಮಿಯವರು ಮಾಡಿದರೆ, ನಿರೂಪಣೆಯನ್ನು ಶ್ರೀಮತಿ ಉಮಾ ನಡೆಸಿಕೊಟ್ಟರು. ರಸಪ್ರಶ್ನೆ ಕಾರ್ಯಕ್ರಮ ಶ್ರೀಮತಿ ರಾಧಾ ನೀಲಕಂಠ ಅವರು ನಡೆಸಿಕೊಟ್ಟರು.

ವರದಿ : ಉಮಾ ಎಸ್.

> ತಾಯೊಲವೆ ತಾಯೊಲವು ಈ ಲೋಕದೊಳಗೆ, ಕಡಲಿಂಗೆ ಕಡಲಲ್ಲದುಂಟೆ ಹೋಲಿಕೆಗೆ.
>
> -- ಜಿ. ಎಸ್. ಶಿವರುದ್ರಪ್ಪ

# ಮಠದಿಂದ ಮಠಕ್ಕೆ ಜಂಗಮ ಜ್ಯೋತಿ

ಜನವರಿ ೨೪, ೨೦೦೧ ರಂದು ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನ ಶ್ರೀ ವಾಟಾಳು ಮಠದಲ್ಲಿ ಅಖಿಲಭಾರತ ಶರಣ ಸಾಹಿತ್ಯ ಪರಿಷತ್ ಮೈಸೂರು ನಗರ ಘಟಕ ಹಾಗೂ ಜಿಲ್ಲಾ ಘಟಕದ ವತಿಯಿಂದ ''ಮಠದಿಂದ ಮಠಕ್ಕೆ ಜಂಗಮ ಜ್ಯೋತಿ'' ಕಾರ್ಯಕ್ರಮ ಮತ್ತು ತಾಲ್ಲೂಕು ಶರಣ ಸಾಹಿತ್ಯ ಪರಿಷತ್‌ನ ಉದ್ಘಾಟನಾ ಸಮಾರಂಭವು ನಡೆಯಿತು. ಈ ಎರಡು ಕಾರ್ಯಕ್ರಮವನ್ನು ಉದ್ಘಾಟಿಸಿದ ಕರ್ನಾಟಕ ಸರ್ಕಾರದ ರೇಷ್ಮೆ ಮತ್ತು ಜವಳಿ ಖಾತೆ ಸಚಿವರಾದ ಶ್ರೀ ಎಂ. ಮಹದೇವು ಅವರು ಮಾತನಾಡಿ, ''ಮಠದಿಂದ-ಮಠಕ್ಕೆ, ನಗರದಿಂದ-ಗ್ರಾಮಕ್ಕೆ, ಮನೆಯಿಂದ-ಮನೆಗೆ, ಮನಸ್ಸಿನಿಂದ-ಮನಸ್ಸಿಗೆ ಶರಣ ಸಂದೇಶ ಕೊಂಡೊಯ್ಯುವ ಕಾರ್ಯಕ್ರಮ ಅರ್ಥಪೂರ್ಣವಾದುದು. ಮಾನವೀಯ ಮೌಲ್ಯಗಳನ್ನು ಕಾಪಾಡಲು, ಸಮಾಜದ ಅಂಕು-ಡೊಂಕುಗಳನ್ನು ತಿದ್ದಲು ಇಂತಹ ಕಾರ್ಯಕ್ರಮಗಳ ಅವಶ್ಯಕತೆಯಿದೆ'' ಎಂದರು.

ಟಿ. ನರಸೀಪುರ ತಾಲ್ಲೂಕಿನ ಶಾಸಕರಾದ ಡಾ|| ಎನ್.ಎಲ್. ಭಾರತೀಶಂಕರ್ ಅವರು ''ಜಾಗತೀಕರಣ ನೀತಿಯನ್ನು ಒಪ್ಪಿಕೊಂಡಿರುವ ನಾವು ಕಾಯಕದ ಬಗ್ಗೆ ಬಸವಣ್ಣನವರು ಹೇಳಿದ್ದಕ್ಕೂ, ಇಂದಿನವರಾದ ನಾವು ಅನುಸರಿಸುತ್ತಿರುವ ನೀತಿಗೂ ತುಂಬಾ ವ್ಯತ್ಯಾಸವಿದೆ. ಬಸವಣ್ಣನವರ ಕಾಯಕ ತತ್ವದಿಂದ ದೂರ ಸರಿಯುತ್ತಿದ್ದೇವೆ'' ಎಂದು ವಿಷಾದ ವ್ಯಕ್ತಪಡಿಸಿದರು.

ಅಧ್ಯಕ್ಷತೆ ವಹಿಸಿದ್ದ ಮಾಜಿ ಸಚಿವರಾದ ಶ್ರೀ ಎಂ.ಪಿ. ಪ್ರಕಾಶ್ ಅವರು ಮಾತನಾಡಿ ''ಇಂದು ಆರಂಭವಾಗುತ್ತಿರುವ ಸಮಾಜದಲ್ಲಿ ಬದಲಾವಣೆಯನ್ನು ಕಾಣಬಯಸಿದ ಈ ಜಂಗಮ ಜ್ಯೋತಿ ಸತ್ಸಂಗದ ಜ್ಯೋತಿ. ಇದು ಇರುವೆಡೆ ಬೆಳಕಿರುತ್ತದೆ, ಜ್ಞಾನ ಹರಡುತ್ತದೆ. ಹಾಗಾಗಿ ನಾವಿಂದು ಪರಿವರ್ತನೆಯತ್ತ ಕಾರ್ಯ ನಿರ್ವಹಿಸಿ ಕಾಯಕದ ಮೌಲ್ಯ ಎತ್ತಿ ಹಿಡಿಯಬೇಕು'' ಎಂದರು.

ಸಮಾರಂಭದ ದಿವ್ಯ ಸಾನ್ನಿಧ್ಯ ವಹಿಸಿದ್ದ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಅನುಗ್ರಹ ನುಡಿಗಳಲ್ಲಿ ''ಮನುಷ್ಯ ಚಲನಶೀಲನಾದಾಗ ಮಾತ್ರ ಜಂಗಮನಾಗಲು ಸಾಧ್ಯ. ಮನುಷ್ಯರು ರಾಗ, ದ್ವೇಷ, ಅಸೂಯೆಗಳನ್ನು ಬಿಟ್ಟು, ಸದ್ಭಾವನೆ ತುಂಬಿಕೊಂಡಾಗ ಜಗತ್ತೆಲ್ಲಾ ಒಳ್ಳೆಯದಾಗಿ ಕಾಣುತ್ತದೆ'' ಎಂದರು.

ಸಮಾರಂಭದ ಸಾನ್ನಿಧ್ಯ ವಹಿಸಿದ್ದ ವಾಟಾಳು ಮಠದ ಸೂರ್ಯಸಿಂಹಾಸನ ಪೀಠಾಧ್ಯಕ್ಷರು ಹಾಗೂ ಶ್ರೀಮಹದೇಶ್ವರ ಸ್ವಾಮಿ ದೇವಸ್ಥಾನದ ಧರ್ಮದರ್ಶಿ ಮಂಡಳಿಯ ಅಧ್ಯಕ್ಷರೂ ಆದ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಮಾತನಾಡಿ ''ಶರಣರ ಮೌಲಿಕ ಸಂದೇಶಗಳು ಗ್ರಾಮೀಣ ಜನರಿಗೆ ತಲುಪುವಂತಾಗಬೇಕು, ಇಂಥ ಸಂದೇಶ ಸಾರುವ ಕೆಲಸಗಳಿಗೆ ಎಲ್ಲಾ ಮಠಾಧಿಪತಿಗಳ ಪೂರ್ಣ ಬೆಂಬಲವಿದೆ. ಜಾತಿ ಭೇದವಿಲ್ಲದೆ ಇಂಥ ಕಾರ್ಯಗಳು ಜಗತ್ತಿನಾದ್ಯಂತ ನಡೆಯಬೇಕು'' ಎಂದರು.

ಜೆ.ಎಸ್.ಎಸ್. ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಪ್ರೊ. ಎ.ಎಂ. ಬಸವರಾಜು ಅವರು ''ಶರಣರ ಜೀವನ ಸಾಧನೆಗಳನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು'' ಎಂದು ತಿಳಿಸಿದರು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು ಘಟಕ ಅಧ್ಯಕ್ಷರಾದ ಶ್ರೀ ಗೊ.ರು. ಪರಮೇಶ್ವರಪ್ಪನವರು ಪ್ರಾಸ್ತಾವಿಕ ನುಡಿಗಳಲ್ಲಿ ಇಂಥ ಶರಣ ಸಂದೇಶ ಸಾರುವ ಕಾರ್ಯಕ್ರಮಗಳಿಂದ ಜನರಿಗೆ ಉಪಯೋಗವಾದರೆ ಅದಕ್ಕಿಂತ ಭಾಗ್ಯ ನಮಗೆ ಮತ್ತೊಂದಿಲ್ಲ ಎಂದು ತಿಳಿಸಿ ಪರಿಷತ್ತಿನ ಕಾರ್ಯ ಚಟುವಟಿಕೆಗಳಿಗೆ ಜನಸಾಮಾನ್ಯರೆಲ್ಲ ಸ್ಪಂದಿಸಬೇಕೆಂದರು. ಘಟಕದ ಪ್ರಧಾನ ಕಾರ್ಯದರ್ಶಿಗಳಾಗದ ಡಾ|| ಎಸ್. ಶಿವರಾಜಪ್ಪ ಅವರು ಸ್ವಾಗತಿಸಿದರು. ಶ್ರೀ ಮಹಾಂತಪ್ಪ ವಂದಿಸಿದರು. ಸಿದ್ಧಾರ್ಥನಗರದ ತರಂಗಿಣಿ ಬಳಗದವರು ವಚನಗಾಯನ ಕಾರ್ಯಕ್ರಮ ನಡೆಸಿಕೊಟ್ಟರು.

ವರದಿ : ಡಾ|| ಎಸ್. ಶಿವರಾಜಪ್ಪ





## ದಯವಿಟ್ಟು ಗಮನಿಸಿ

*ಈ ಶತಮಾನದ ಪ್ರಕೃತಿ ವಿಕೋಪದ ಘೋರ ದುರಂತ ಗುಜರಾತು ರಾಜ್ಯದ ಭೀಕರ ಭೂಕಂಪ !*
*ಸಹಸ್ರ, ಸಹಸ್ರ, ಜೀವಹಾನಿ; ಕೋಟಿ ಕೋಟಿ ಆಸ್ತಿ ನಷ್ಟ; ಲಕ್ಷ ಲಕ್ಷ ಜನರ ನೋವು-ಕಣ್ಣೀರು!*
*ಜಗತ್ತಿನ ಮೂಲೆ ಮೂಲೆಗಳಿಂದ ಸಹಾಯ ಹಸ್ತ; ಪರಿಹಾರ; ಸಹಕಾರ !*
*ಈ ಮಾನವೀಯ ಅನುಕಂಪದ ಮಹಾಕಾರ್ಯದಲ್ಲಿ*
*ನಮ್ಮ ಪಾಲೂ ಇರಲಿ.*

*ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು*
*ತನ್ನ ಸದಸ್ಯರು ಮತ್ತು ಅಭಿಮಾನಿಗಳಿಂದ ಕೂಡಿಬರುವ ಸಂಗ್ರಹವನ್ನು ಪ್ರಧಾನಿಗಳ*
*ಪರಿಹಾರ (ಗುಜರಾತು) ನಿಧಿಗೆ ವಿನಮ್ರ ಕಾಣಿಕೆಯಾಗಿ ಸಲ್ಲಿಸಬೇಕೆಂದಿದೆ.*
*ದಯವಿಟ್ಟು ಈ ಸೇವಾಕಾರ್ಯದಲ್ಲಿ ಸಹಕರಿಸಿ. ಕೊಡುಗೆಗಳನ್ನು*
*''ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು'' ಈ ಹೆಸರಿಗೆ ಬರೆದ ಕ್ರಾಸ್ ಮಾಡಿದ*
*ಚೆಕ್ ಅಥವಾ ಡಿಡಿಯನ್ನು (ಚೆಕ್ ಅಥವಾ ಡಿ.ಡಿ. ಹಿಂಭಾಗದಲ್ಲಿ 'ಪ್ರಧಾನಿಗಳ*
*(ಗುಜರಾತು) ಪರಿಹಾರನಿಧಿಗೆ' ಎಂಬುದನ್ನು ಕಾಣಿಸಿ) ಕಳುಹಿಸಬಹುದು. ಎಲ್ಲ*
*ಕೊಡುಗೆಗಳಿಗೂ ಅಧಿಕೃತ ರಸೀದಿ ನೀಡಲಾಗುವುದು.*

*ಸಂಪರ್ಕ ವಿಳಾಸ*

**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**
೧ನೆಯ ಮುಖ್ಯರಸ್ತೆ, ೮ನೆಯ ಬ್ಲಾಕ್, ಜಯನಗರ, ಬೆಂಗಳೂರು – ೫೬೦ ೦೮೨.
ದೂರವಾಣಿ : ೬೫೪೯೩೯೪




***The Elephant in the Mirror***

A. : **Dr. H.M. Marula Siddaiah**
P : Indian Academy of Social Sciences
Karnataka Chapter
62, Manjunatha Colony
3rd Cross, J.P. Nagar
Bangalore – 560 078
P.Y. 2000; Pages : 242, Price Rs. 225/–

***ಸಮರಸ***

ಲೇ : **ಎಂ. ಪಿ. ರಮೇಶ ಗದಗ**
ಪ್ರ : ಅಮರಗೀತಾ ಪ್ರಕಾಶನ
ಜೆ.ಟಿ. ಕಾಲೇಜು ರಸ್ತೆ
ಗಣಪತಿ ಗುಡಿ ಹತ್ತಿರ
ಗದಗ – ೫೮೨೧೦೧
ಮು : ೨೦೦೦, ಪುಟ : ೬೪; ಬೆಲೆ : ೨೫ ರೂ.

***ದಾರಿದೀಪ***

ಲೇ : **ರಾಜೇಂದ್ರ ಎಸ್. ಗಡಾದ**
ಪ್ರ : ಸಂಗಮ ಪ್ರಕಾಶನ
ಪಿ ಅಂಡ್ ಟಿ ಕ್ವಾರ್ಟರ್ಸ್ ಎದುರು
ರಾಜೀವಗಾಂಧಿ ನಗರ
ಗದಗ – ೫೮೨೧೦೧
ಮು : ೨೦೦೦, ಪುಟ : ೪೦; ಬೆಲೆ : ೨೨ ರೂ.

***ಬಸವ ಧರ್ಮ ಯಾರ ಸೊತ್ತು?***
(ದ್ವಿತೀಯ ಮುದ್ರಣ)

ಲೇ : **ಕುಮಾರ್ ಕಕ್ಕಯ್ಯ ಪೋಳ**
ಪ್ರ : ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ
ಕಕ್ಕಯ್ಯ ನಿವಾಸ, ಕೆ.ಹೆಚ್.ಪಿ. ಕಾಲನಿ
ವಿಜಾಪುರ – ೩
ಮು : ೨೦೦೧, ಪುಟ : ೧೨೮; ಬೆಲೆ : ೫೦ ರೂ.

***ಪರಂಜ್ಯೋತಿ (ವಿಶೇಷ ಸಂಚಿಕೆ)***

ಗೌ.ಸಂ : **ಎಸ್.ಐ. ಮಠದ**
ಪ್ರ : ಶ್ರೀ ಜಗದ್ಗುರು ಗಂಗಾಧರ
ಧರ್ಮಪ್ರಚಾರ ಮಂಡಳ
ಮೂರು ಸಾವಿರ ಮಠ, ಹುಬ್ಬಳ್ಳಿ
ಮು : ಫೆಬ್ರವರಿ ೨೦೦೧; ಬೆಲೆ ರೂ. ೫

***ನನ್ನ ಪ್ರವಾಸಕಥನ***

ಲೇ : **ಆಶಾದೇವಿ ಖೂಬಾ**
ಪ್ರ : ಸದ್ಭಾವಗೋಷ್ಠಿ ಸಮಿತಿ,
ಗದ್ದುಗೆಮಠ, ಮಕ್ತಂಪೂರ
ಗುಲಬರ್ಗಾ
ಮು : ೨೦೦೦; ಪುಟ : ೭೭, ಬೆಲೆ. ೩೦ ರೂ.

***ಜಾನಪದ ಸೃಷ್ಟಿ-ದೃಷ್ಟಿ***

ಲೇ : **ಹಸನಬಿ ಬೀಳಗಿ**
ಪ್ರ : ಸಾಯಿ ಪ್ರಕಾಶನ
ಜಯನಗರ ಕ್ರಾಸ್ ಹತ್ತಿರ
ಸಪ್ತಾಪೂರ, ಧಾರವಾಡ – ೫೮೦೦೦೧
ಮು : ೨೦೦೦; ಪುಟ : ೧೨೮, ಬೆಲೆ : ರೂ. ೫೫

***ಅರಿವು – ಆಚಾರ***

ಸಂ : **ಬಿ. ಮಹಾದೇವಪ್ಪ**
ಪ್ರ : ಅರಿವು-ಆಚಾರ ಪ್ರಕಟಣಾಲಯ
ನಂ. ೯, ಇಂಡಸ್ಟ್ರೀಯಲ್ ಎಸ್ಟೇಟ್
ಎಂ.ಎಸ್.ಕೆ. ಮಿಲ್ ರಸ್ತೆ
ಗುಲಬರ್ಗಾ – ೫೮೫೧೦೨
ಮು : ಸಂಚಿಕೆ : ೩, ಬೆಲೆ : ರೂ. ೧೦.





# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.) ಮೈಸೂರು

## ಪರಿಷತ್ತಿನ ಪ್ರಕಟಣೆಗಳು

| | ಬೆಲೆ ರೂ. ಗಳು |
|---|---|
| ವಚನ ಸಾಹಿತ್ಯ | ೫೦.೦೦ |
| ವಚನ ವಾಙ್ಮಯ ಮತ್ತು ಭಾಷೆ | ೫೦.೦೦ |
| ವಚನ ಸಾಹಿತ್ಯ ಮತ್ತು ಮಹಿಳೆ | ೫೦.೦೦ |
| ಶಿವಯೋಗಿ ಸಿದ್ಧರಾಮ | ೫೦.೦೦ |
| ಚನ್ನಬಸವಣ್ಣ | ೫೦.೦೦ |
| ಅಕ್ಕಮಹಾದೇವಿ | ೫೦.೦೦ |
| ಶರಣ ತತ್ತ್ವ ಚಿಂತನ (೪) | ೭೫.೦೦ |
| ಶರಣರು ಮತ್ತು ಸಂತರು | ೩೦.೦೦ |
| ವಚನ ಗುಮ್ಮಟ ಫ.ಗು. ಹಳಕಟ್ಟಿ | ೨೫.೦೦ |
| ಕದಳಿ ಬನ (ವಚನ ಸಂಗ್ರಹ) | ೧೦.೦೦ |
| **Anubhava Mantapa (English)** | ೧೫.೦೦ |
| ಅನುಭವ ಮಂಟಪ (ಹಿಂದಿ) | ೧೦.೦೦ |
| **Dimensions of Bhakti Movement in India** | ೨೦೦.೦೦ |
| **Veerashaiva Deepti** | ೨೫.೦೦ |
| ವೀರಶೈವ ದೀಪ್ತಿ – (ತತ್ತ್ವ ಚಿಂತನ) | ೩೦.೦೦ |
| ವೀರಶೈವ ದೀಪ್ತಿ – (ಗೋಷ್ಠಿ ಚಿಂತನ) | ೨೦.೦೦ |
| ವೀರಶೈವ ದೀಪ್ತಿ – (ಸಾಹಿತ್ಯ ಚಿಂತನ) | ೧೦೦.೦೦ |
| ಶರಣ ಕಿರಣ | ೫೦.೦೦ |
| ಜೇಡರ ದಾಸಿಮಯ್ಯ | ೫೦.೦೦ |
| ಸ್ವರ ವಚನಗಳು (ಒಂದು ಅಧ್ಯಯನ) | ೬೦.೦೦ |
| ಶರಣ ತತ್ತ್ವ ಚಿಂತನ (೫) | ೧೦೦.೦೦ |
| ಜಗದಗಲ ಮುಗಿಲಗಲ (ಧ್ವನಿಸುರಳಿ) | ೩೫.೦೦ |

## ಪತ್ರ ವ್ಯವಹಾರ

**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.) ಮೈಸೂರು**
ಆಡಳಿತ ಕಾರ್ಯಾಲಯ : ೧ನೇ ಮುಖ್ಯರಸ್ತೆ, ೮ನೇ ವಿಭಾಗ
ಜಯನಗರ, ಬೆಂಗಳೂರು – ೫೬೦ ೦೮೨.

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.)
ಮೈಸೂರು

## ಸದಸ್ಯತ್ವ ವಿವರ

| | | |
|---|---|---|
| ಮಹಾಪೋಷಕರು | - | 5000 ರೂ |
| ಪೋಷಕರು | - | 3000 ರೂ |
| ದಾತೃಗಳು | - | 1000 ರೂ. |
| ಆಜೀವ | - | 300 ರೂ. |
| ವಾರ್ಷಿಕ | - | 30 ರೂ. |

## ಸದಸ್ಯ ಸಂಸ್ಥೆಗಳು :

| | | |
|---|---|---|
| ಪೋಷಕ | - | 2000 ರೂ. |
| ಆಜೀವ | - | 1000 ರೂ. |
| ವಾರ್ಷಿಕ | - | 100 ರೂ. |

## ಮಹಾಮನೆ ಚಂದಾ

| | | |
|---|---|---|
| ವಾರ್ಷಿಕ | - | 100 ರೂ. |
| ಆಜೀವ | - | 500 ರೂ. |
| ಬಿಡಿ ಸಂಚಿಕೆ | - | 10 ರೂ. |

ಪತ್ರ ವ್ಯವಹಾರ :
ಅಖಿಲ ಭಾರತ
ಶರಣ ಸಾಹಿತ್ಯ ಪರಿಷತ್ತು
1ನೆಯ ಮುಖ್ಯರಸ್ತೆ, 8ನೆಯ ವಿಭಾಗ
ಜಯನಗರ, ಬೆಂಗಳೂರು-560 082
ದೂರವಾಣಿ : 6549394 - 221-224

## ಮಹಾಮನೆ ಚಂದಾದಾರರ ಗಮನಕ್ಕೆ

'ಮಹಾಮನೆ'ಗೆ ವಾರ್ಷಿಕ ಸದಸ್ಯರಾದವರು ದಯವಿಟ್ಟು ಸಕಾಲದಲ್ಲಿ ತಮ್ಮ ಸದಸ್ಯತ್ವವನ್ನು ನವೀಕರಿಸಿ ಸಹಕರಿಸಬೇಕಾಗಿ ವಿನಂತಿ. ಸದಸ್ಯತ್ವದ ಅವಧಿ ಮುಗಿದ ಮೇಲೂ **'ಮಹಾಮನೆ'** ನಿಮ್ಮ ಮನೆಗೆ ಬರುವುದು ಕಷ್ಟವಾಗುತ್ತದೆ.

ನಿಮ್ಮ ಚಂದಾ ಅವಧಿ ಮುಗಿಯುವ ದಿನಾಂಕವನ್ನು **'ಮಹಾಮನೆ'**ಯ ಲಕೋಟೆಯ ಮೇಲಿರುವ ನಿಮ್ಮ ವಿಳಾಸದ ಮೇಲೆ ಕಾಣಿಸಿದೆ. ದಯವಿಟ್ಟು ಗಮನಿಸಿ.

ವರ್ಷಕ್ಕೊಮ್ಮೆ **100** ರೂ. ಕಳುಹಿಸುವುದು ನಿಮ್ಮ ಕಾರ್ಯಭಾರದಲ್ಲಿ ಮರೆತುಹೋಗಿಬಿಡಬಹುದು. ಅದಕ್ಕೆ ಬದಲಾಗಿ ಒಮ್ಮೆಗೇ **500** ರೂ. ಕಳುಹಿಸಿ ಅಜೀವ ಸದಸ್ಯತ್ವ ಪಡೆದರೆ ನಮಗೆ ಮತ್ತು ನಿಮಗೆ ಇಬ್ಬರಿಗೂ ಅನುಕೂಲ.

ಇನ್ನು ಪ್ರತಿಯೊಬ್ಬ ಚಂದಾದಾರರೂ ತಮ್ಮ ಜೊತೆಗೆ ಇನ್ನೊಬ್ಬ ಹೊಸ ಚಂದಾದಾರರನ್ನು ನೋಂದಾಯಿಸು ವಂತಾದರೆ **'ಮಹಾಮನೆ'** ಮತ್ತಷ್ಟು ಅರ್ಥಪೂರ್ಣವಾಗಿ ಆಕರ್ಷಕವಾಗಿ ಬರಲು ಸಾಧ್ಯವಾದೀತು.

ದಯವಿಟ್ಟು ಸಹಕರಿಸಿ.

- ಪ್ರಕಾಶಕರು

## ಮಹಾಮನೆ - ಜಾಹಿರಾತು ದರ

| | |
|---|---|
| ರಕ್ಷಾಪುಟ - 4 | ರೂ. 5,000 |
| ರಕ್ಷಾಪುಟ - 2 ಅಥವಾ 3 | ರೂ. 3,000 |
| ಒಳಪುಟ ವಿಶೇಷ | ರೂ. 2,000 |
| ಒಳಪುಟ ಸಾಧಾರಣ | ರೂ. 1,000 |
| ಅರ್ಧಪುಟ | ರೂ. 600 |

ಜಾಹಿರಾತು ಸಾಹಿತ್ಯ ಮತ್ತು ಶುಲ್ಕವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಲಯಕ್ಕೆ ಕಳುಹಿಸ ಬಹುದು. ಕ್ರಾಸ್ ಮಾಡಿದ ಚೆಕ್ ಅಥವಾ ಡಿ.ಡಿ.ಗಳನ್ನು "ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ಮಹಾಮನೆ)" ಈ ಹೆಸರಿಗೆ ಬರೆಯಬೇಕು.

- ಸಂಪಾದಕರು

Published by : Akhila Bharatha Sharana Sahithya Parishat (Regd.)
Ist Main, 8th Block, Jayanagar, Bangalore-560 082.
Printed at : Geetanjali Enterprises, # 5, M.S.R. Industrial Estate, Mathikere, Bangalore-54.
Editors : M.G. Nagaraj and H.S. Siddagangappa

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.)

ಮೈಸೂರು

## ಸದಸ್ಯತ್ವ ವಿವರ

| | | |
|---|---|---|
| ಮಹಾಪೋಷಕರು | - | 5000 ರೂ |
| ಪೋಷಕರು | - | 3000 ರೂ |
| ದಾತೃಗಳು | - | 1000 ರೂ. |
| ಆಜೀವ | - | 300 ರೂ. |
| ವಾರ್ಷಿಕ | - | 30 ರೂ. |

## ಸದಸ್ಯ ಸಂಸ್ಥೆಗಳು :

| | | |
|---|---|---|
| ಪೋಷಕ | - | 2000 ರೂ. |
| ಆಜೀವ | - | 1000 ರೂ. |
| ವಾರ್ಷಿಕ | - | 100 ರೂ. |

## ಮಹಾಮನೆ ಚಂದಾ

| | | |
|---|---|---|
| ವಾರ್ಷಿಕ | - | 100 ರೂ. |
| ಆಜೀವ | - | 500 ರೂ. |
| ಬಿಡಿ ಸಂಚಿಕೆ | - | 10 ರೂ. |

## ಪತ್ರ ವ್ಯವಹಾರ :

### ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

1ನೆಯ ಮುಖ್ಯರಸ್ತೆ, 8ನೆಯ ವಿಭಾಗ
ಜಯನಗರ, ಬೆಂಗಳೂರು-560 082
ದೂರವಾಣಿ : 6549394 - 221-224

## ಮಹಾಮನೆ ಚಂದಾದಾರರ ಗಮನಕ್ಕೆ

'ಮಹಾಮನೆ'ಗೆ ವಾರ್ಷಿಕ ಸದಸ್ಯರಾದವರು ದಯವಿಟ್ಟು ಸಕಾಲದಲ್ಲಿ ತಮ್ಮ ಸದಸ್ಯತ್ವವನ್ನು ನವೀಕರಿಸಿ ಸಹಕರಿಸಬೇಕಾಗಿ ವಿನಂತಿ. ಸದಸ್ಯತ್ವದ ಅವಧಿ ಮುಗಿದ ಮೇಲೂ **'ಮಹಾಮನೆ'** ನಿಮ್ಮ ಮನೆಗೆ ಬರುವುದು ಕಷ್ಟವಾಗುತ್ತದೆ.

ನಿಮ್ಮ ಚಂದಾ ಅವಧಿ ಮುಗಿಯುವ ದಿನಾಂಕವನ್ನು **'ಮಹಾಮನೆ'**ಯ ಲಕೋಟೆಯ ಮೇಲಿರುವ ನಿಮ್ಮ ವಿಳಾಸದ ಮೇಲೆ ಕಾಣಿಸಿದೆ. ದಯವಿಟ್ಟು ಗಮನಿಸಿ.

ವರ್ಷಕ್ಕೊಮ್ಮೆ **100** ರೂ. ಕಳುಹಿಸುವುದು ನಿಮ್ಮ ಕಾರ್ಯಭಾರದಲ್ಲಿ ಮರೆತುಹೋಗಿಬಿಡಬಹುದು. ಅದಕ್ಕೆ ಬದಲಾಗಿ ಒಮ್ಮೆಗೇ **500** ರೂ. ಕಳುಹಿಸಿ ಅಜೀವ ಸದಸ್ಯತ್ವ ಪಡೆದರೆ ನಮಗೆ ಮತ್ತು ನಿಮಗೆ ಇಬ್ಬರಿಗೂ ಅನುಕೂಲ.

ಇನ್ನು ಪ್ರತಿಯೊಬ್ಬ ಚಂದಾದಾರರೂ ತಮ್ಮ ಜೊತೆಗೆ ಇನ್ನೊಬ್ಬ ಹೊಸ ಚಂದಾದಾರರನ್ನು ನೋಂದಾಯಿಸುವಂತಾದರೆ **'ಮಹಾಮನೆ'** ಮತ್ತಷ್ಟು ಅರ್ಥಪೂರ್ಣವಾಗಿ ಆಕರ್ಷಕವಾಗಿ ಬರಲು ಸಾಧ್ಯವಾದೀತು.

ದಯವಿಟ್ಟು ಸಹಕರಿಸಿ.

- ಪ್ರಕಾಶಕರು

## ಮಹಾಮನೆ - ಜಾಹಿರಾತು ದರ

| | |
|---|---|
| ರಕ್ಷಾಪುಟ - 4 | ರೂ. 5,000 |
| ರಕ್ಷಾಪುಟ - 2 ಅಥವಾ 3 | ರೂ. 3,000 |
| ಒಳಪುಟ ವಿಶೇಷ | ರೂ. 2,000 |
| ಒಳಪುಟ ಸಾಧಾರಣ | ರೂ. 1,000 |
| ಅರ್ಧಪುಟ | ರೂ. 600 |

ಜಾಹಿರಾತು ಸಾಹಿತ್ಯ ಮತ್ತು ಶುಲ್ಕವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಲಯಕ್ಕೆ ಕಳುಹಿಸಬಹುದು. ಕ್ರಾಸ್ ಮಾಡಿದ ಚೆಕ್ ಅಥವಾ ಡಿ.ಡಿ.ಗಳನ್ನು "ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ಮಹಾಮನೆ)" ಈ ಹೆಸರಿಗೆ ಬರೆಯಬೇಕು.

- ಸಂಪಾದಕರು

Published by : Akhila Bharatha Sharana Sahithya Parishat (Regd.)
Ist Main, 8th Block, Jayanagar, Bangalore-560 082.
Printed at : Geetanjali Enterprises, # 5, M.S.R. Industrial Estate, Mathikere, Bangalore-54.
Editors : M.G. Nagaraj and H.S. Siddagangappa